ಶ್ರೀಶಾನುದಾಸ ಗ್ರನ್ಥಮಾಲಾ—೧೩ ❋ ಸಂಪ್ರದಾಯಾರ್ಥಪ್ರಕಾಶನಶಾಖೆ—೧

# ಶ್ರೀವೈಷ್ಣವಧರ್ಮ ಮತ್ತು ಸತ್ಸಂಪ್ರದಾಯನಿಷ್ಠೆ

## ಶ್ರೀವೇದಾನ್ತಾಚಾರ್ಯರು ಮತ್ತು ಶ್ರೀವರವರಮುನಿಗಳು ಅವರ ಅಭಿಪ್ರಾಯಗಳಲ್ಲಿರುವ ಸಾಮರಸ್ಯ

## ಸಂಸ್ಥಾಪಕರ ಸ್ಮಾರಕ ಪ್ರಬಂಧ

ಸತ್ಸಂಪ್ರದಾಯವಿಬುಧೈರನುಶಿಕ್ಷಿತೇನ
ಶ್ರೀಶಾನುದಾಸಗುರುಸಂತತಿಕಿಂಕರೇಣ ।
ಶ್ರೀ ಯಾದವಾದ್ರಿರಮಣಸ್ಯ ಕೃಪಾಬಲೇನ
ಮುದ್ರಾಪಿತೋಽಸ್ತು ಸುಹೃದಾಂ ಪರಿತೋಷಣಾಯ ॥

ಲೇಖಕರು :

ಶ್ರೀ "ವಿದ್ಯಾಭೂಷಣಂ" ಆ. ನ. ಶ್ರೀನಿವಾಸೈಯಂಗಾರ್

ಪ್ರಕಾಶಕರು :

"ಪದ್ಮಾಲಯಾ" ಬಂಧುಗಳು ಮತ್ತು ಶ್ರೀ ರಾಮಾನುಜ
ಧರ್ಮಪ್ರಚಾರ ಸಂಘದ ಮೈಸೂರು ಶಾಖೆ
ಶ್ರೀ ಗೋದಾಮಂದಿರಂ, ಮಲ್ಲೇಶ್ವರಂ, ಬೆಂಗಳೂರು.



ಕೀಲಕ ವರ್ಷ ಮಕರ ಪುನರ್ವಸು:
ಶ್ರೀ ಎಂಬಾರ್ ತಿರುನಕ್ಷತ್ರಂ
ಮೇಲುಕೋಟೆ ಪುನರ್ವಸು ಉತ್ಸವ

ಬೆಲೆ : ೧-೫೦ ಪೈಸೆ.

# ಅರಿಕೆ

ಜಯತು ಯಶಸಾ ತುಂಗಂ ರಂಗಂ ಜಗತ್ತ್ರಯಮಂಗಲಂ
ಜಯತು ಸುಚಿರಂ ತಸ್ಮಿನ್ ಭೂಮಾ ರಮಾಮಣಿ ಭೂಷಣಂ ।
ವರದಗುರುಣಾ ಸಾರ್ಧಂ ತಸ್ಮೈ ಶುಭಾನ್ಯಭಿವರ್ಧಯನ್
ವರವರಮುನಿಃ ಶ್ರೀಮಾನ್ ರಾಮಾನುಜೋ ಜಯತು ಕ್ಷಿತೌ ॥

ಶ್ರೀಶಾನುದಾಸ ಗ್ರಂಥಮಾಲೆ ೧೪೪ಕರ **"ತಿರುವಾಡಿಪ್ಪೂರಂ"** ಎಂದರೆ ಶ್ರೀ ಗೋದಾ (ಆಂಡಾಳ್) ದೇವಿಯ ಜಯಂತೀ ಮಹೋತ್ಸವದ ದಿನ **"ಶ್ರೀ ರಾಮಾನುಜರ ವಿಜಯಸ್ಥಾನ"**ವಾದ **ಶ್ರೀ ಯದುಗಿರಿ** (ಮೇಲುಕೋಟೆ) ಕ್ಷೇತ್ರದಲ್ಲಿ ಸ್ಥಾಪಿತವಾಯಿತು. **ತಿರುಪ್ಪಾವೈ, ನಿತ್ಯಾನುಸಂಧಾನಂ, ತಿರುಮಾಲೈ ತಿರುವಾಶಿರಿಯಂ, ನಾಯಕೀಗೀತೆ** ಎಂಬ ಪ್ರಬಂಧಗಳು ಇದುವರೆಗೆ ಕನ್ನಡದಲ್ಲಿ ಸರಳಾನುವಾದದೊಡನೆ ಪ್ರಕಟವಾಗಿವೆ. ಆಳ್ವಾರುಗಳ ವೈಭವವನ್ನೂ ಉಳಿದ ದಿವ್ಯ ಪ್ರಬಂಧಗಳನ್ನೂ ಕನ್ನಡದಲ್ಲಿ ಪ್ರಕಟಿಸುವ ಹಿರಿಯ ಕೆಲಸವಿನ್ನೂ ಆಗಬೇಕಾಗಿದೆ. ಇದಕ್ಕೆ ಕನ್ನಡನಾಡಿನ ಶ್ರೀಮಂತರೂ ಧಾರ್ಮಿಕರೂ ಸಾಹಿತ್ಯಧರ್ಮಾಭಿಮಾನಿಗಳೂ ಉದಾರ ಹಸ್ತದಿಂದ ಸಹಕರಿಸಬೇಕಾಗಿ ಪ್ರಾರ್ಥನೆ.

**ಸರ್ವಶ್ರುತಿ ಸಾಮರಸ್ಯ, ಸರ್ವಪ್ರಮಾಣ ಸಮನ್ವಯ, ಅನನ್ಯ ದೈವತ್ವ**ವೆಂಬ ವಿಶೇಷ ಲಕ್ಷಣಗಳಿಂದ ಶೋಭಿಸುವ ನಮ್ಮ **"ವೈದಿಕೋತ್ತಮ ಸಿದ್ಧಾಂತ"**ವಾದ **ಶ್ರೀ "ರಾಮಾನುಜದರ್ಶನ"**ವನ್ನು ಸಂರಕ್ಷಿಸಿದ ಎಲ್ಲಾ ಆಚಾರ್ಯರೂ ಏಕಕಂಠದಿಂದ ದರ್ಶನ ಸ್ಥಾಪಕರಾದ ಭಗವದ್ರಾಮಾನುಜರ ಸಂಬಂಧದಿಂದಲೇ ನಮಗೆಲ್ಲಾ ಉಜ್ಜೀವನವೆಂದು ಉಪದೇಶಿಸಿರುವುದನ್ನು ಈ ಪ್ರಬಂಧದಲ್ಲಿ ಸಂಗ್ರಹವಾಗಿ ನಿರೂಪಿಸಿದೆ. ಸಹೃದಯರು **ಪ್ರೋತ್ಸಾಹ** ಸಹಕಾರಗಳನ್ನು ನೀಡಿ ಗ್ರಂಥಮಾಲೆಯ ಕಾರ್ಯವನ್ನು ಪೂರೈಸಿ ಕೊಡಬೇಕಾಗಿ ಕೋರುತ್ತೇನೆ.

ಈ ಗ್ರಂಥಮಾಲೆಯ ಸಂಸ್ಥಾಪಕರೂ ಶ್ರೀ ಯದುಶೈಲನಿತ್ಯವಾಸದಿಂದಲೂ ಶ್ರೀಮನ್ನಾರಾಯಣನ ನಿತ್ಯಕೈಂಕರ್ಯದಿಂದಲೂ ಸರ್ವರಿಗೂ ಸಂಮಾನ್ಯರೂ ಆದ ನನ್ನ ತೀರ್ಥರೂಪರವರ ದಿವ್ಯಜೀವನದ ಪವಿತ್ರ ಸ್ಮಾರಕವಾಗಿ ಶ್ರೀರಾಮಾನುಜಾಚಾರ್ಯರು ಶ್ರೀ ಯಾದವಗಿರಿ ಕ್ಷೇತ್ರವನ್ನು ಜೀರ್ಣೋದ್ಧಾರ ಮಾಡಿದ ಈ ಸನ್ನಿಧಿಯಲ್ಲಿ ಈ ಕಾಣಿಕೆ ಪ್ರಕಟವಾಗಿದೆ.

“ತಿರುನಾರರ್ಣತ್ತಾಳ್ಕಾಲಂಪೆರಚ್ಚಿನ್ದಿತ್ತುಯ್ಮಿನೋ”



ಸಮುಕ್ಕುಂ ಪೂರ್ವಿಮಿಶ್ಶೈನಂಗ್ಗೈಕ್ಕುಮಿನ್ಪನ್ನೆ ಜ್ಞಾಲತ್ತಾರ್
ತಮುಕ್ಕುಂ ವಾನತ್ತವರ್ಕ್ಕುಂ ಪೆರುಮಾನ್ನೈ, “ತಣ್ಣಾಮರೈ
ಶುಮುಕ್ಕುಂ ಪಾದಪ್ಪೆರುಮಾನ್ನೈ”, ಚ್ಚೊಲ್ಮಾಲೈಹಳ್ ಶೊಲ್ಲುಮಾ
ರಮೈಕ್ಕವಲ್ಲೇರ್ಕ್ಕಿನಿಯೂವರ್ ನಿಹರಹಲ್ವಾನತ್ತೇ ॥ ನಮ್ಮಾಳ್ವಾರ್
ತಿರುವಾಯ್ಮೊಳಿ. (೩೫–೮)

ಮೇಲುಕೋಟೆ ಪುನರ್ವಸು ಉತ್ಸವ ✳ 31—1—1969

**ಶ್ರೀಶಾನುದಾಸಗ್ರಂಥಮಾಲಾ ಪ್ರಕಾಶನ**



ಜೀಯಾದ್ರಾಮಾನುಜಾಚಾರ್ಯೋ
ಯದುಶೈಲಪತೇಃ ಪಿತಾ ।
ನಾರಾಯಣಪ್ರತಿಷ್ಠಾತಾ
ಹರಿಭಕ್ತಿ ಸುಧಾನಿಧಿಃ ॥
ಶ್ರೀಮದ್ಯಾದವಶೈಲೇಶ
ಕ್ಷೀರಕೈಂಕರ್ಯಶಾಲಿನೇ ।
ಶ್ರೀಶಾನುದಾಸಗುರವೇ
ಜನನ್ಯಾರ್ಯಾಯ ಮಂಗಲಂ ॥

ಶ್ರೀಶಾನುದಾಸ ಗ್ರನ್ಥಮಾಲಾ, ಮೇಲುಕೋಟೆ

ಶ್ರೀಮತೇ ರಾಮಾನುಜಾಯನಮಃ

# ಶ್ರೀವೈಷ್ಣವದರ್ಶನ, ಸತ್ಸಂಪ್ರದಾಯನಿಷ್ಠೆ ಮತ್ತು ಶ್ರೀವೇದಾಂತಾಚಾರ್ಯರು

**ಲೇಖಕ: ಶ್ರೀ 'ವಿದ್ಯಾಭೂಷಣಂ' ಅ. ನ. ಶ್ರೀನಿವಾಸೈಯಂಗಾರ್,**
**ಬಿ.ಎಸ್.ಸಿ. (ಆನರ್ಸ್)**

ಗೌರವ ಸಂಪಾದಕ, ಶ್ರೀಶಾನುದಾಸ ಗ್ರಂಥಮಾಲಾ, ಬೆಂಗಳೂರು.

ಪುಣ್ಯಾಂಭೋಜವಿಕಾಸಾಯ ಪಾಪಧ್ವಾನ್ತಕ್ಷಯಾಯ ಚ ।
ಶ್ರೀಮಾನಾವಿರಭೂತ್ ಭೂಮೌ ರಾಮಾನುಜದಿವಾಕರಃ ॥
—ಶ್ರೀವತ್ಸಾಂಕಮಿಶ್ರರು.

ಪ್ರಮಾಣಂ ಚ ಪ್ರಮೇಯಂ ಚ ಪ್ರಮಾತಾರಶ್ಚ ಸಾತ್ತ್ವಿಕಾಃ
ಜಯನ್ತು ಕ್ಷಪಿತಾರಿಷ್ಟಂ ಸಹ ಸರ್ವತ್ರ ಸರ್ವದಾ ॥
— ಶ್ರುತಪ್ರಕಾಶಿಕಾಚಾರ್ಯರು

ಜಯತಿ ಸಕಲ ವಿದ್ಯಾವಾಹಿನೀ ಜನ್ಮಶೈಲೋ
ಜನಿಪಥ ಪರಿವೃತ್ತಿಶ್ರಾನ್ತ ವಿಶ್ರಾನ್ತಿಶಾಖೀ ।
ನಿಖಿಲ ಕುಮತಿ ಮಾಯಾ ಶರ್ವರೀ ಬಾಲಸೂರ್ಯೋ
ನಿಗಮಜಲಧಿವೇಲಾಪೂರ್ಣಚಂದ್ರೋ ಯತೀಂದ್ರಃ ॥
ನಾಥೋಪಜ್ಞಂ ಪ್ರವೃತ್ತಂ ಬಹುಭಿರುಪಚಿತಂ ಯಾಮುನೇಯ ಪ್ರಬನ್ಧೈಃ
**ಸಂಯುಕ್ ತ್ರಾತಂ ಯತೀಂದ್ರೈರಿದಮಖಿಲತಮಃಕರ್ಶನಂ ದರ್ಶನಂ ನಃ**
— ಶ್ರೀ ವೇದಾನ್ತಾಚಾರ್ಯರು

ರಾಮಃ ಶ್ರೀಮಾನ್ ರವಿಸುತಸಖೋ ವರ್ಧತಾಂ ಯೂಥಪಾಲೈಃ
ದೇವೀ ತಸ್ಮೈ ದಿಶತು ಕುಶಲಂ ಮೈಥಿಲೀ ನಿತ್ಯಯೋಗಾತ್ ।
ಸಾನುಕ್ರೋಶೋ ಜಯತು ಜನಯನ್ ಸರ್ವತಃ ತತ್ಪ್ರಸಾದಂ
ಸೌಮಿತ್ರಿರ್ಮೇ ಸ ಖಲು ಭಗವಾನ್ ಸೌಮ್ಯಜಾಮಾತೃಯೋಗೀ ।
— ಶ್ರೀ ದೇವರಾಜಗುರುಗಳು

# ೧. ಶ್ರೀ ವೈಷ್ಣವ ಧರ್ಮದ ವೈಶಿಷ್ಟ್ಯ

ನಮ್ಮ ಶ್ರೀ ವೈಷ್ಣವ ಧರ್ಮ "**ಸನಾತನ ಧರ್ಮ**" ಎಂದು ಪ್ರಸಿದ್ಧವಾದ "**ವೈದಿಕ ಧರ್ಮ**"ದ ಶಾಖೆಗಳಲ್ಲಿ ಒಂದು. ಇದು ವೇದದಂತೆ, ವೇದಪ್ರತಿಪಾದ್ಯನಾದ ಪುರುಷೋತ್ತಮನಂತೆ, ನಿತ್ಯವಾದುದು. "ಅನಾದಿನಿಧನಂವಿಷ್ಣುಂ" ಎನ್ನುವ ಭಗವಂತನಂತೆ ಇದೂ ಆದ್ಯಂತರಹಿತವಾದುದು. ವಿಶ್ವದ ಪ್ರಥಮ ಉದ್ಗ್ರಂಥವಾದ ಋಗ್ವೇದದಲ್ಲಿ ಹಲವೆಡೆಗಳಲ್ಲಿ ಈ ಧರ್ಮ ಪ್ರತಿಪಾದಿತವಾಗಿದೆ. ಋಗ್ವೇದದಲ್ಲಿರುವ ವಿಷ್ಣುಸೂಕ್ತವೂ ಪುರುಷಸೂಕ್ತವೂ ಶ್ರೀಮನ್ನಾರಾಯಣನೆಂಬ ಪರತತ್ತ್ವದ ಸ್ವರೂಪರೂಪಗುಣವಿಭವಗಳನ್ನು ಸ್ಪಷ್ಟವಾಗಿ ತಿಳಿಸುತ್ತವೆ. "**ತದ್ವಿಷ್ಣೋಃ ಪರಮಂ ಪದಂ । ಸದಾ ಪಶ್ಯನ್ತಿ ಸೂರಯಃ ||**", "ವಿಷ್ಣೋಃ ಪರಮೇ ಪದೇ ಮಧ್ವ ಉತ್ಸಃ", "ತ್ರೀಣಿಪದಾ ವಿಚಕ್ರಮೇ, "ಇದಂವಿಷ್ಣುರ್ವಿಚಕ್ರಮೇ", "ಉರುಕ್ರಮಸ್ಯ ಸಹಿ ಬಂಧುರಿತ್ಥಾ" ಇತ್ಯಾದಿ ಶ್ರುತಿ ವಾಕ್ಯಗಳು ಶ್ರೀಮನ್ನಾರಾಯಣನು ಪರಮಪದದಲ್ಲಿ ನೆಲೆಸಿದಾನೆ, ಅವನ ಪಾದಾರವಿಂದದಲ್ಲಿ ಅಮೃತದ ಊಟೆ ಇದೆ, ಅವನು ಎಲ್ಲರಿಗೂ ಅವ್ಯಾಜಬಂಧು, ಲೋಕಹಿತಕ್ಕಾಗಿ ಅವನು ಭೂಮಿಯನ್ನಳೆದು ವಸಿಷ್ಠಚಂಡಾಳ ಭೇದವಿಲ್ಲದೆ ಎಲ್ಲರ ಮೇಲೂ—ತನ್ನ ಮಹಿಮೆಯನ್ನರಿಯದವರ ಮೇಲೂ, ತನ್ನನ್ನು ನಿಂದಿಸುವವರ ಮೇಲೂ–ಪಕ್ಷಪಾತ ಮಾಡದೆ, ಈ ಲೋಕವೆಲ್ಲಾ ತನ್ನದು ಎಂದು ತೋರಿಸಲು ಮಹಾಬಲಿಯ ಯಾಗಶಾಲೆಯಲ್ಲಿ ಜನಗಳೆಲ್ಲರ ಮುಂದೆ ತ್ರಿವಿಕ್ರಮನಾಗಿ ಬೆಳೆದು ತನ್ನ ಸರ್ವಸ್ವಾಮಿತ್ ಪರತ್ವವನ್ನೂ ಆಶ್ರಿತವಾತ್ಸಲ್ಯವನ್ನೂ ಪ್ರಕಟಿಸಿ "**ವಿಷ್ಣೋಃ ಕರ್ಮಾಣಿ ಪಶ್ಯತ**" ಎಂದು ಶ್ರುತಿ ಘೋಷಿಸುವಂತೆ ಮೂರಡಿಯಿಟ್ಟು, ತಾನು "**ಸರ್ವಲೋಕೈಕನಾಥ**"ನೆಂದು ವೇದವ್ಯಾಸರು ಸ್ತುತಿಸುವಂತೆ, ಮಹಾಬಲಿಯ ಔದಾರ್ಯಗುಣಕ್ಕೆ ಮೆಚ್ಚಿ ಅವನ ಮನೆಬಾಗಿಲಿನಲ್ಲಿ ಈಗ ಗದಾಧರನಾಗಿ ನೆಲೆಸಿರುವನು. ಈ ಅತಿಮಾನುಷ ವ್ಯಾಪಾರಕ್ಕೆ ತಲೆಬಾಗಿ "ಕೋಲ ಮಾಮೇನ್ ಶೆನ್ನಿಕ್ಕಣ್ ಕಮಲಮನ್ನ ಕುಱೈಕೞಲೇ[೧] ಮಾಲಡಿ ಮುಡಿ

---

೧. ತಿರುಪಳ್ಳಿಯೆೞುಚ್ಚಿ—(ಶಿನನೇ ಗೀತೆ ೭ ಪದ್ಯ)

ಪೋಲ್ ಕೋಲಮಾಂ ಕುಲಶೇಖರನ್" ೨ "ತಳಿರ್‌ಪುರೈಯುಂ ತಿರುವಡಿಯೆರ್ ತಲ್ಪೈ ಪೋಲವೇ ೩ ಎಂದು ಆಳ್ವಾರುಗಳೂ "ಯನ್ಮೂರ್ಧ್ನಿ ಮೇ ಶ್ರುತಿ ಶಿರಸ್ಸಿಚ ಭಾತಿ ಯಸ್ಮಿನ್" ಎಂದು ೪ ಆಳವಂದಾರರೂ. "ಆಮ್ನಾಯ ಮೂರ್ಧನಿ ಚ ಮೂರ್ಧ್ವನಿಚೋರ್ಧ್ವಪುಂಸಾಂ ಯದ್ಧಾಮ ವೈಷ್ಣವಂ ಅಭೀಕ್ಷ್ಣತರಂ ಚಕಾಸ್ತಿ" ಎಂದು ಶ್ರೀ ರಾಮಾನುಜರ ಶಿಷ್ಯರಲ್ಲಿ ಮೊದಲಿಗರೂ ವೇದಾಂತವನ್ನರಿತವರಲ್ಲಿ ಅಗ್ರೇಸರರೂ ಆದ ಕೂರತ್ತಾಳ್ವಾರರೂ ಕೊಂಡಾಡಿರುವರು. ಶ್ರೀ ವೈಷ್ಣವ ಮಂದಿರಗಳಲ್ಲಿ ಶ್ರೀ ಶಡಕೋಪನ್ (ಶಠಾರಿ) ಎಂಬ ದೇವರ ಪಾದುಕೆಯನ್ನು ಭಕ್ತರ ಮೇಲೆ ಇಡುವುದಕ್ಕೆ ಈ ಶ್ರುತಿ ವಾಕ್ಯಗಳೂ ತಮಿಳು ದಿವ್ಯ ಪ್ರಬಂಧಗಳೂ ಉಭಯವೇದಾಂತಾಚಾರ್ಯರೂ ಆದ ಮಹಾತ್ಮರ ಉಕ್ತ್ಯನುಷ್ಠಾನಗಳೂ ಆಧಾರ. ಭಗವನ್ಮಂಗಲಾಶಾಸನ ಮಾಡಲು ಬರುವ ಭಕ್ತರಿಗೆ ದೇವರ ದರ್ಶನವಾದಮೇಲೆ ತಿರುಮಾಲೈ, ತೀರ್ಥ, ಶ್ರೀ ಶಠಾರಿ ಸೇವೆಯ ಮರ್ಯಾದೆಗಳು ಪ್ರಾಚೀನ ಶ್ರೀ ವೈಷ್ಣವ ಮಂದಿರಗಳಲ್ಲಿಯೂ ಅವರ ಅನುಯಾಯಿಗಳ ದೇವಾಲಯಗಳಲ್ಲಿಯೂ ಮಾತ್ರ ಇಂದಿಗೂ ಬಳಕೆಯಲ್ಲಿವೆ. ಶ್ರೀವೈಷ್ಣವ ಮಠಾಧಿಪತಿಗಳಿಗೂ ಆಚಾರ್ಯ ಪುರುಷರಿಗೂ ಮಹಾವಿದ್ವಾಂಸರಿಗೂ ಈ ಮರ್ಯಾದೆಗಳನ್ನು ಇಂದಿಗೂ ಸಲ್ಲಿಸುತ್ತಿರುವರು.

ನಾಲ್ಕು ವೇದಗಳಲ್ಲಿಯೂ 'ಪುರುಷಸೂಕ್ತ' ಬರುತ್ತದೆ. ವೈದಿಕರೆಲ್ಲರೂ ವಿಷ್ಣುವನ್ನು ಪೂಜಿಸುತ್ತಾರೆ, "ಯಜ್ಞೋವೈವಿಷ್ಣುಃ" ಎಂದು ವೇದವೇ ಘೋಷಿಸುತ್ತದೆ. 'ಯಜದೇವಪೂಜಾಯಾಂ' ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಸರ್ವಕರ್ಮಸಮಾರಾಧ್ಯನೂ ಸಕಲ ಫಲಪ್ರದನೂ ಸತ್, ಬ್ರಹ್ಮ, ಆತ್ಮಾ, ಪರಮಾತ್ಮಾ, ಸರ್ವಾತ್ಮಾ, ಪರಬ್ರಹ್ಮ, ಪರತತ್ವ ಪರಂಜ್ಯೋತಿ, ಪರದೇವತೆ ಎಂಬ ನಾನಾ ಶಬ್ದಗಳಿಂದ ವರ್ಣಿತವಾಗಿರುವ ಸರ್ವಕಲ್ಯಾಣಗುಣಾಕರನೂ ಸಮಸ್ತಹೇಯಪ್ರತಿಭಟನೂ ಉಭಯ ವಿಭೂತಿ

---

೨ ಪೆರುಮಾಳ್ ತಿರುಮೊಳಿ.--(೨ನೇ ಗೀತೆ ೧೧ ಪದ್ಯ)

೩ ತಿರುನೆಡುಂದಾಂಡಕಂ--೧

೪ ಸ್ತೋತ್ರರತ್ನಂ--೬

೫ ಶ್ರೀ ವೈಕುಂಠಸ್ತವ--೭

ನಾಯಕನೂ ಆದ "ಭಗವಾನ್", "ವಿಷ್ಣು" ವಾಸುದೇವ" ಎಂಬ ಶ್ರೀಮನ್ನಾರಾಯಣನ ಆರಾಧನ, ಸೇವೆ, ಕೈಂಕರ್ಯ, ಭಜನೆ ಎಂದು ಅರ್ಥ.

ತೇವುಮೆಪ್ಪೊರುಳುಂ ಪಡೈಕ್ಕ
ಪೂವಿಲ್‌ನಾನ್ಮುಹನೈಪ್ಪಡೈತ್ತ
ತೇವನೆಂಬಿರುಮಾನುಕ್ಕಲ್ಲಾಲ್
ಪೂವುಂ ಪೂಶನೈಯುಂ ತಹುವೇ ?||— ತಿರುವಾಯ್ಮೊಳಿ. ೧೨—೪

ಎಂದು ನಮ್ಮ "ಕುಲಪತಿಗಳೂ ಪ್ರಪನ್ನಜನಕೂಟಸ್ಥರೂ" ಆದ ಶ್ರೀಮತ್‌ಪರಾಂಕುಶಮುನಿಗಳು (ನಮ್ಮಾಳ್ವಾರ್, ಶ್ರೀಶಠಕೋಪರ್) ಹಾಡಿದಾರೆ. ದೇವತೆಗಳನ್ನೂ ಮತ್ತೆಲ್ಲಾ ವಸ್ತುಗಳನ್ನೂ ಸೃಷ್ಟಿಸುವಂತೆ ತನ್ನ ನಾಭೀಕಮಲದಲ್ಲಿ ಚತುರ್ಮುಖಬ್ರಹ್ಮನನ್ನು ಪಡೆದ ದೇವನಾದ (ಪರದೇವತೆ, ದೇವತಾಸಾರ್ವಭೌಮನಾದ) ನನ್ನೊಡೆಯನಿಗಲ್ಲದೆ ಮತ್ತಾರಿಗಾದರೂ ಹೂವೂ ಪೂಜನೆಯೂ ತಕ್ಕುದೋ (ಉಚಿತವೋ)? ಎಂದು ಈ ಪಾಶುರ(ಪದ್ಯ)ದಲ್ಲಿ ಕೇಳಿದಾರೆ.

ಅವರಿಗಿಂತ ಮೊದಲು ಅವತರಿಸಿದ ಶ್ರೀ ಭಕ್ತಿಸಾರರೆಂಬ ತಿರುಮೞಿಶೈಯಾಳ್ವಾರರು ತಮ್ಮ ತಿರುವಂದಾದಿಯ ಮೊದಲನೇ ಪದ್ಯದಲ್ಲಿ ಹೀಗೆ ಹಾಡಿದಾರೆ:—"ನಾಲ್ಮೊಗ (ಬ್ರಹ್ಮ)ನನ್ನು ನಾರಾಯಣನು ಪಡೆದನು; ಆ ನಾಲ್ಮೊಗನು ಸೃಷ್ಟಿಗೆ ಪ್ರವರ್ತಕನಾಗಿ (ಐದುಮುಖವುಳ್ಳ) ಶಂಕರನನ್ನು ಪಡೆದನು" ಈ ಶಂಕರನು (ರುದ್ರ, ಮಹಾದೇವ, ಶಿವ, ಶೂಲೀ) ಮಹಾಭಾಗವತ, ಶ್ರೀರಾಮಭಕ್ತ ಮತ್ತು ನೃಸಿಂಹೋಪಾಸಕ. ಈತನು ಪಾವನಾರ್ಥವಾಗಿ ತನ್ನ ಜಟೆಯ ಮಧ್ಯದಲ್ಲಿ ಲೋಕಪಾವನೆಯಾದ, ವಿಷ್ಣುಪಾದೋದ್ಭವೆಯಾದ ಗಂಗೆಯನ್ನು ಧರಿಸಿ "ಗಂಗಾಧರ" ನೆಂದು ಪ್ರಸಿದ್ಧನಾಗಿದಾನೆ. ತ್ರಿವಿಕ್ರಮಾವತಾರಕಾಲದಲ್ಲಿ ಭಗವಂತನ ಒಂದು ಪಾದ ಕೆಳಗಿನ ಲೋಕಗಳನ್ನೆಲ್ಲಾ ಅಳೆಯಿತು; ಮೇಲಕ್ಕೆ ಎತ್ತಿದ ಮತ್ತೊಂದು ಪಾದ ಏಳುಲೋಕಗಳನ್ನೂ ದಾಟಿ ಶ್ರೀ ವೈಕುಂಠದವರೆಗೆ ಬೆಳೆಯಿತು. ಚತುರ್ಮುಖ ಬ್ರಹ್ಮನು ಆ ಪಾದ

ವನ್ನು ತನ್ನ ಕಮಂಡಲತೀರ್ಥದಿಂದ ಕೈಯಾರ ಪುರುಷಸೂಕ್ತಾದಿ ಮಂತ್ರ ಗಳನ್ನು ಹೇಳುತ್ತಾ ತೊಳೆದು ಆ ಪರಮಪಾವನವಾದ ತೀರ್ಥವನ್ನು ತಾನು ಪ್ರೋಕ್ಷಿಸಿಕೊಂಡು ತನ್ನ ಮಗ ಶಿವನ ತಲೆಯ ಮೇಲೆಯೂ ಪ್ರೋಕ್ಷಿಸಿದನು. ಈ ಶಿವನೇ ಹಿಮವಾನ್-ಮೇನಾದಂಪತಿಗಳ ಸುತೆಯಾದ ಉಮೆ (ಪಾರ್ವತಿ) ಯನ್ನು ವರಿಸಿ ಆರುಮೊಗದ ಸ್ಕಂದ, ಷಣ್ಮುಗ, ಕಾರ್ತಿಕೇಯ ಮತ್ತು ಸುಬ್ರಹ್ಮಣ್ಯ (ಮುರುಹ್) ಎಂಬ ಪ್ರಸಿದ್ಧನಾಗಿರುವ ದೇವಸೇನಾಪತಿ ಅಥವಾ ಕುಮಾರಸ್ವಾಮಿಯನ್ನು ಪಡೆದನೆಂದು ಪುರಾಣಗಳಿಂದಲೂ ಕಾಳಿದಾಸನ ಕುಮಾರಸಂಭವದಿಂದಲೂ ತಿಳಿದು ಬರುತ್ತದೆ. ಇದರಿಂದ ಪರದೇವತಾಸಂಭಾ ವನೆಯಿರುವ ಬ್ರಹ್ಮರುದ್ರಾದಿಗಳಿಗೆಲ್ಲಾ ಕಾರಣವಾದ ನಾಭೀಪದ್ಮವನ್ನುಳ್ಳ ಪದ್ಮನಾಭನೇ ಪುರುಷೋತ್ತಮ, ಸಕಲಜಗತ್ಕಾರಣ; ಆದುದರಿಂದ ಅವನೇ ಸದಾಧ್ಯೇಯ, ಉಪಾಸ್ಯ ಮತ್ತು ಆಶ್ರಯಣೀಯ, ಸರ್ವಲೋಕೈಕನಾಥ ನೆಂದು ಸಿದ್ಧವಾಗುತ್ತದೆ. ಹೀಗೆ ಬ್ರಹ್ಮಾದಿದೇವತೆಗಳು ಸಂಸಾರ ಪ್ರವರ್ತಕ ರಾದರೆ, ಪರಮ ಪುರುಷನ ಅನುಗ್ರಹದಿಂದ, ಅವನ ಅಪ್ಪಣೆಯಂತೆ, ಪರಮ ಪದದಲ್ಲಿರುವ ದಿವ್ಯಸೂರಿಗಳು ಈ ಭೂಮಂಡದಲ್ಲಿ ದ್ವಾಪರಯುಗದ ಕೊನೆ ಯಲ್ಲೂ ಕಲಿಯುಗದ ಆದಿಯಲ್ಲೂ ಅವತರಿಸಿ ಅನಂತವಾದ ವೇದಗಳ ಸಾರಾರ್ಥವನ್ನು ತಮ್ಮ ದಿವ್ಯ ಪ್ರಬಂಧಗಳ ಮೂಲಕ ಪ್ರಕಟಪಡಿಸಿ ಲೋಕೋ ಜ್ಜೀವನ ಮಾಡಿದರು. ಹೀಗೆ **" ಸಂಸಾರಬಂಧಸ್ಥಿತಿಮೋಕ್ಷಹೇತು "** ವಾದ ಶ್ರೀಮನ್ನಾರಾಯಣನೇ **ಸಂಸಾರನಿವೃತ್ತಿ** ಅಥವಾ **ಮೋಕ್ಷಕ್ಕೂ** ಪ್ರವರ್ತಕನಾದನೆಂಬುದು ವ್ಯಕ್ತವಾಗುತ್ತದೆ.

" **ಧ್ಯೇಯಂಶ್ರೀಪತಿರೂಪಮಜಸ್ರಂ** " ಎಂಬ ಭಜಗೋವಿಂದ ಸ್ತೋತ್ರದ ಪಾದವನ್ನು ಕೇಳದವರಾರು? ಹರಿಯೇಸರ್ವೋತ್ತಮನೆಂದೂ ಹರಿ ದಾಸರ ಸೇವೆಯೇ ಕೇಶವನೊಲುಮೆಗೆ ಹಾದಿಯೆಂದೂ ಬೋಧಿಸಿದ ಕನ್ನಡ ನಾಡಿನ ಹರಿದಾಸರ ಪದಗಳು ಸರ್ವಜನ ಪ್ರಿಯವಾಗಿಲ್ಲವೇ? ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಶಂಕರಾಚಾರ್ಯರು, ಮಧ್ವಾಚಾರ್ಯರು ಮತ್ತು ಅವರ ಪರಂಪರೆಯವರು ಸ್ತೋತ್ರಗಳನ್ನೂ ಕೀರ್ತನೆಗಳನ್ನೂ ಹಾಡಿರುವಂತೆ ನಮ್ಮ ಕನ್ನಡ ನಾಡಿನ ನೆರೆನಾಡಾದ ತಮಿಳುನಾಡಿನಲ್ಲಿ ಇವರಿಗಿಂತ ಮೊದಲೇ ಭಗ

ವಂತನ ಭಕ್ತಿ ಸಾಗರದಲ್ಲಿ ಮುಳುಗಿದ್ದುದರಿಂದ ಆೞ್ವಾರ್ (ಆಳ್ವಾರ್) ಎಂದು ಪ್ರಸಿದ್ಧರಾಗಿರುವ ಭಾಗವತಶಿರೋಮಣಿಗಳು ಇದ್ದರು. ಅವರು ದೇಶಭಾಷೆಯಾದ ತಮಿಳಿನಲ್ಲಿ ಭಗವಂತನಿಗೆ ಅಭಿಮತವಾದ, ಸಕಲ ವೇದಸಾರವನ್ನು ತಿಳಿಸುವ, ತಮ್ಮ ಭಗವದನುಭವ ಪರೀವಾಹರೂಪವಾದ ಗೀತೆಗಳನ್ನು ಹಾಡಿದಾರೆ. ಇವುಗಳಿಗೆ "**ನಾಲಾಯಿರದಿವ್ಯಪ್ರಬಂಧಂ**" ಎಂದು ಹೆಸರು. ವೇದಾಧಿಕಾರವಿಲ್ಲದ ಸ್ತ್ರೀ ಶೂದ್ರರೂ ಸಂಸ್ಕೃತವನ್ನರಿಯದ ಸಾಮಾನ್ಯ ಜನರೂ ಬಹು ಸುಲಭವಾಗಿ ತತ್ತ್ವ, ಹಿತ, ಪುರುಷಾರ್ಥಗಳನ್ನೂ ಈ **ದಿವ್ಯ ಪ್ರಬಂಧಗಳಿಂದ** ಅರಿತು ಇಹದಲ್ಲಿ ಅಭ್ಯುದಯವನ್ನೂ ಪರಲೋಕದಲ್ಲಿ ಶಾಶ್ವತವಾದ ಮುಕ್ತಿ ( ಮೋಕ್ಷ ) ಸಾಮ್ರಾಜ್ಯವನ್ನೂ ಪಡೆಯಬಹುದು. ಈ ಆಳ್ವಾರುಗಳ ಅವತಾರದ ಸೂಚನೆ ಶ್ರೀ ಭಾಗವತದಲ್ಲಿ ಹೀಗಿದೆ:—

ಕಲೌ ಖಲು ಭವಿಷ್ಯನ್ತಿ ನಾರಾಯಣ ಪರಾಯಣಾಃ ।
ಕ್ವಚಿತ್ ಕ್ವಚಿತ್ ಮಹಾರಾಜ ದ್ರಾವಿಡೇಷು ಚ ಭೂರಿಶಃ
ತಾಮ್ರಪರ್ಣೀ ನದೀ ಯತ್ರ ಕೃತಮಾಲಾ ಪಯಸ್ವಿನೀ ।
ಕಾವೇರೀ ಚ ಮಹಾಭಾಗಾ ಪ್ರತೀಚೀ ಚ ಮಹಾನದೀ ॥
ಯೇ ಪಿಬನ್ತಿ ಜಲಂ ತಾಸಾಂ ಮನುಜಾ ಮನುಜೇಶ್ವರ ।
ತೇಷಾಂ ನಾರಾಯಣೇ ಭಕ್ತಿಃ ಭೂಯಸೀ ನಿರುಪದ್ರವಾ ॥

ಜ್ಞಾನಿಗಳಲ್ಲಿ ಅಗ್ರೇಸರರೂ ಮಹಾಭಾಗವತರೂ ಆದ ಮಹಾತ್ಮರು, ಸಾಧುಗಳು, ಸತ್ಪುರುಷರು ತಾಮ್ರಪರ್ಣೀ, ಪಾಲಾರ್, ಕಾವೇರೀ ನದಿಗಳು ಹರಿಯುವ ತಮಿಳುನಾಡಿನಲ್ಲಿ ವಿಶೇಷವಾಗಿ ಆವಿರ್ಭವಿಸುವರು; ಆ ನದಿಗಳ ತೀರ್ಥಪಾನಮಾಡುವ ಮನುಷ್ಯರಿಗೆ ನಾರಾಯಣನಲ್ಲಿ ದೃಢವಾದ ಭಕ್ತಿ ವಿಶೇಷವುಂಟಾಗುವುದೆಂದು ತ್ರಿಕಾಲಜ್ಞಾನಿಗಳಾದ ಶುಕಮಹರ್ಷಿಗಳೇ ಸೂಚಿಸಿರುವರು.

ಅವರಂತೆಯೇ ಶ್ರೀನಮ್ಮಾಳ್ವಾರ್ರವರೂ "ಪೊಲಿಹ! ಪೊಲಿಹ!" ಎಂದು ಮೊದಲಾಗುವ ತಮ್ಮ ಗೀತೆಯಲ್ಲಿ (ತಿರುವಾಯ್ಮೊೞಿ ೫-೨ನೇ ಗೀತೆ) **ಕಲಿಯುಂಕೆಡುಂ ಕಂಡುಕೊಳ್ಮಿನ್**" ಎಂದು ಹಾಡಿ, ತಿರುಮಂಗೈಯಾಳ್ವಾರ್ ಶ್ರೀರಾಮಾನುಜಾಚಾರ್ಯರು ಇವರಂತಹ ಭಾಗವತಶಿಖಾಮಣಿಗಳು,

ಆಚಾರ್ಯಸಾರ್ವಭೌಮರು ಅವತರಿಸುವರು ಮತ್ತು ಅವರನ್ನು ಆಶ್ರಯಿಸಿ ದವರಿಗೆ ಕಲಿಯುಗದ ಸ್ವಭಾವವಳಿಯುವುದು ಎಂದು ಭವಿಷ್ಯ ನುಡಿದಿರು ವರು.

ಕ್ರೂರೇ ಕಲಿಯುಗೇ ಪ್ರಾಪ್ತೇ ನಾಸ್ತಿಕ್ಯೈಕೇಃಕಲುಷೀಕೃತೇ
ವಿಷ್ಣೋರಂಶಾಂಶಸಂಭೂತೋ ವೇದವೇದಾರ್ಥತತ್ತ್ವವಿತ್
**ಸ್ತೋತ್ರಂ ವೇದಮಯಂ ಕರ್ತುಂ ದ್ರಾವಿಡ್ಯಾಪಿ ಚ ಭಾಷಯಾ**
**ಜನಿಷ್ಯತಿ ಸತಾಂ ಶ್ರೇಷ್ಠೋ ಲೋಕಾನಾಂ ಹಿತಕಾಮ್ಯಯಾ**

ಎಂದು ಭವಿಷ್ಯ ಪುರಾಣದಲ್ಲಿ ಹೇಳಿದೆ. ಇದರಿಂದ ಆಳ್ವಾರುಗಳ ವೈಭವ ವಿಶೇಷವೂ, ಲೋಕೋಜ್ಜೀವನಕ್ಕಾಗಿಯೇ ಅವರು ಭಗವಂತನಂತೆ ಅವತರಿಸು ವರು ಎಂಬ ಅಂಶವೂ ವ್ಯಕ್ತವಾಗುತ್ತದೆ. ಆದುದರಿಂದಲೇ **ಕವಿತಾರ್ಕಿಕಸಿಂಹ** ರೆಂದೂ "**ವೇದಾನ್ತಾಚಾರ್ಯ**"ರೆಂದೂ ಪ್ರಸಿದ್ಧರಾದ ಸಪ್ತ ಮುಕ್ತಿ ಕ್ಷೇತ್ರ ಗಳಲ್ಲಿ ಮಿಗಿಲಾದ ಶ್ರೀ ಕಾಂಚೀ ನಗರದಲ್ಲಿರುವ "**ತಿರುತ್ತಣ್ಕಾ**" "**ವಿಳಕ್ಕೊಳಿ**" ಎಂಬ ದಿವ್ಯದೇಶದಲ್ಲಿ ಕಲಿಯುಗದ ಪ್ರತ್ಯಕ್ಷ ದೈವವಾದ ತಿರುಪತಿ ಶ್ರೀನಿವಾಸನ ಜಯಂತೀ ದಿನ ಆವಿರ್ಭವಿಸಿದ **ತೂಪ್ಪುಲ್ ಕುಲಮಣಿ ವೇಂಕಟನಾಥಾ ಚಾರ್ಯರು** ತಮ್ಮ **ರಹಸ್ಯತ್ರಯಸಾರದಲ್ಲಿ** ಆಳ್ವಾರುಗಳು ಭಗವಂತನ " **ಅಭಿನವ ದಶಾವತಾರ** " ವೆಂದು ಕೊಂಡಾಡಿರುವುದು ಉಚಿತವೇ ಆಗಿದೆ. ಇವರೆಲ್ಲರೂ ಭಗವಂತನ ಸಂಕಲ್ಪದಂತೆ, ಅವನ ಅಪ್ಪಣೆಯಂತೆ, ಈ ಲೋಕದ ಅಜ್ಞಾನಾಂಧಕಾರವಳಿಯುವಂತೆ, ಮುಂದಮತಿಗಳೂ ಉಜ್ಜೀವಿಸುವಂತೆ ದೇವತೆಗಳೇ ಜನ್ಮವನ್ನು ಆಶಿಸುವಂತಹ ಪುಣ್ಯಭೂಮಿಯಾದ ನಮ್ಮ ಭಾರತ ದೇಶದಲ್ಲಿ, ಶ್ರೀರಾಮಚಂದ್ರನಿಗೆ ಅಸ್ತ್ರಗ್ರಾಮವಿತ್ತು ಅನುಗ್ರಹಿಸಿದ ಅಗಸ್ತ್ಯ ಮಹರ್ಷಿಗಳು ಲೋಕಹಿತಾರ್ಥವಾಗಿ ಬಂದು ನೆಲೆಸಿದ ದಕ್ಷಿಣಾಪಥದಲ್ಲಿ, ಗಂಗೆಗಿಂತ ಪವಿತ್ರವಾದ ಕಾವೇರಿ, ಕಲ್ಯಾಣೀ, ಮೊದಲಾದ ನದಿಗಳೂ ತೀರ್ಥಗಳೂ ಇರುವ, ಅದ್ಭುತರಮ್ಯವಾದ ಭಗವನ್ಮಂದಿರಗಳಿಂದ ಶಂಗೊಳಿ ಸುವ,ದಕ್ಷಿಣ ದಿಕ್ಕಿಗೆ ತಿಲಕನಂತಿರುವ, ಭೂಭಾಗದಲ್ಲಿ ನಾನಾ ಕಾಲ ದೇಶಗಳಲ್ಲಿ ನಾನಾ ವರ್ಣಗಳಲ್ಲಿ ಅವತರಿಸಿ **ಭಗವದ್ಭಕ್ತರೆಲ್ಲರೂ ಪೂಜ್ಯರೆಂದು ತೋರಿ**

ಸುತ್ತಾ, ಭಗವಂತನಿಗೆ ಅಭಿಮತವಾದ ವೇದವೇದಾಂತ ಸಾರಾರ್ಥಗಳನ್ನೂ ಆಬಾಲಗೋಪಾಲರೂ ಪಂಡಿತರೂ ಪಾಮರರೂ ಸ್ತ್ರೀ ಶೂದ್ರಾದಿ ಸರ್ವ ಮನುಜರೂ ಎಲ್ಲರೂ ಸುಲಭವಾಗಿ ಕಲಿತು ಆಚರಿಸಿ ಉಜ್ಜೀವಿಸುವಂತೆ ಸುಂದರವಾದ ದೇಶಭಾಷೆಯಲ್ಲಿ ತಿಳಿಯಾದ ಶೈಲಿಯಲ್ಲಿ ಹೃದಯಂಗಮವಾಗಿ ಹಾಡಿ ಭಾರತದ ಸಂಸ್ಕೃತಿಯ ಸಂರಕ್ಷಣೆಗೆ ಪರಮೋಪಕಾರ ಮಾಡಿರುವರು. ಶ್ರೀಲೋಕಸಾರಂಗಮುನಿ ಶ್ರೀಮನ್ನಾಥಮುನಿಗಳೇ ಮೊದಲಾದ ಪ್ರಾಚಾರ್ಯೋತ್ತಮರು ಇವರ ದಿವ್ಯ ಪ್ರಬಂಧಗಳನ್ನು ಆದರಿಸಿ ಸಂರಕ್ಷಿಸಿರುವರು.

ವ್ಯಾಸ ವಾಲ್ಮೀಕಿ ಪರಾಶರಾದಿ ಮಹರ್ಷಿಗಳಿಂದ ಪ್ರಣೀತವಾದ ಇತಿಹಾಸ ಪುರಾಣರತ್ನಗಳಿದ್ದರೂ ಶ್ರೀರಂಗನಾಥನು ಅವುಗಳನ್ನೆಲ್ಲಾ ಬಿಟ್ಟು ತನ್ನ ದಿವ್ಯಾಸ್ಥಾನದಲ್ಲಿ ತನ್ನ ಪರಿಜನ ಪರಿಚ್ಛದಗಳೊಡನೆ ಮಂಡಿಸಿ ಮಾಸಗಳಲ್ಲಿ ಶ್ರೇಷ್ಠವಾದ ಮಾರ್ಗಶಿರ ಮಾಸ (ಧನುರ್ಮಾಸ)ದಲ್ಲಿ ಈ ದಿವ್ಯ ಪ್ರಬಂಧಗಳನ್ನು ಆದರಿಸಿ ಕೇಳುವ ದೃಶ್ಯ ಅತ್ಯದ್ಭುತವಾದುದು! ಈ "ತಿರುವಧ್ಯಯನೋತ್ಸವಂ "ಎಂದು ಕರೆಯುವ ಕೊಠಾರೋತ್ಸವ ಶ್ರೀ ವೈಷ್ಣವ ದೇವಾಲಯಗಳಿಗೇ ಮೀಸಲಾದುದು! ಆಳ್ವಾರುಗಳ ದಿವ್ಯ ಪ್ರಬಂಧಗಳ ಗಾನ, ವಾಚನ, ಅಭಿನಯ, ವ್ಯಾಖ್ಯಾನ, ಶ್ರವಣಗಳಿಗೇ ಮೀಸಲಾದ ಈ ಮಹೋತ್ಸವ, ಪ್ರಾಚೀನ ವೈಷ್ಣವ ಮಂದಿರಗಳಲ್ಲೆಲ್ಲಾ ಪ್ರತಿವರ್ಷವೂ ನಡೆದುಬರುತ್ತಿದೆ. ಮತ್ತೆಲ್ಲಿಯೂ ಭಕ್ತರ ಮತ್ತು ಭಾಗವತರ ಮಹಿಮೆ ಹೀಗೆ ಸ್ಪಷ್ಟವಾಗಿ ನೋಡಬರುವುದಿಲ್ಲ. ಶ್ರೀರಂಗದ ದೇವಾಲಯದಲ್ಲಿ ಶ್ರೀಮನ್ನಾಥಮುನಿಗಳ ಕಾಲದಿಂದ "**ವಿಣ್ಣಪ್ಪಂ ಶೆಯ್ವಾರ್**" "ಅರೈಯರ್" ಎಂಬ ಗಾಯಕ ಶಿಖಾಮಣಿಗಳು ಈ ದಿವ್ಯ ಪ್ರಬಂಧಗಳನ್ನು ದೇವರ ಮುಂದೆ ಹಾಡುತ್ತಾ ಅಭಿನಯಿಸುವ ಪದ್ಧತಿ ಬಳಕೆಯಲ್ಲಿದೆ. ಶ್ರೀರಂಗದಂತೆ ಆಳ್ವಾರ್ ತಿರುನಗರಿ. ಶ್ರೀವಿಲ್ಲಿಪುತ್ತೂರ್, ತಿರುನಾರಾಯಣಪುರಂ (ಮೇಲುಕೋಟೆ) ಮೊದಲಾದ ಪ್ರಾಚೀನ ದಿವ್ಯಸ್ಥಳಗಳಲ್ಲಿ ಈ **ಅರೈಯರ್** ಕೈಂಕರ್ಯ ತಪ್ಪದೆ ಭಗವತ್ಸನ್ನಿಧಿಯಲ್ಲಿ ನಡೆದುಕೊಂಡು ಬರುತ್ತಿದೆ. ಮೇಲುಕೋಟೆಯಲ್ಲಿ ಶ್ರೀ ಯದುಗಿರಿ ನಾರಾಯಣಸ್ವಾಮಿಯವರ ಮುಂದೆ, ಶ್ರೀ ಯತಿರಾಜ ಸಂಘತ್ಸಂಪದ (ಚೆಲುವರಾಯ)ಸ್ವಾಮಿಯ ಗೋಷ್ಠಿಯಲ್ಲಿ, ಅಧ್ಯಯನೋತ್ಸವದ ನಾಲ್ಕನೇ

ದಿನ ರಾತ್ರಿ ಜರುಗುವ ಒರುನಾಯಂಹಂ ವ್ಯಾಖ್ಯಾನವನ್ನು " ವಿಣ್ಣಪ್ಪಂ ಶೈವಾರ್ " ಎಂಬ "**ಅಣ್ಣೈಯರ್ ಸ್ವಾಮಿಗಳು** ಹೇಳುವುದನ್ನು ಇಂದಿಗೂ ಶ್ರೀ ವೈಷ್ಣವರೆಲ್ಲರೂ ಕೇಳಿ ಧನ್ಯರಾಗಬಹುದು.

## ೨. "ಪರಮ ವೈದಿಕ ದರ್ಶನ"ವೇ ರಾಮಾನುಜ ದರ್ಶನ

ಹೀಗೆ ಸನಾತನವಾದ ವೈದಿಕ ಧರ್ಮದಲ್ಲಿ ವಿಶಿಷ್ಟವಾದ ಸಂಪ್ರದಾಯ-ಪರಂಪರೆಯನ್ನು ಪಡೆದಿರುವ ಈ ವಿಲಕ್ಷಣವಾದ ಶ್ರೀ ವೈಷ್ಣವಧರ್ಮ ಪರಮ ಸಾತ್ತ್ವಿಕವೂ ಪಾವನವೂ ಆದುದು. ಅದನ್ನು ಎಲ್ಲರೂ ಅವಲಂಬಿಸಿ ಉಜ್ಜೀವಿಸಬಹುದು. ಇದನ್ನು "**ಭಕ್ತಾಮೃತಂ** ವಿಶ್ವಜನಾನುಮೋದನಂ ಸರ್ವಾರ್ಥದಂ ಶ್ರೀ ಶಠಕೋಪವಾಙ್ಮಯಂ" ಎಂದು ಶ್ರೀಮನ್ನಾಥಮುನಿಗಳು ಕೊಂಡಾಡಿದಾರೆ. "**ಪೂರ್ವಾಚಾರ್ಯಸುರಕ್ಷಿತ**" ವಾದ ಈ **ಪರಮ ವೈದಿಕ ದರ್ಶನ**ವನ್ನು ವ್ಯಾಸ, ಕಾಶಕೃತ್ಸ್ನ, ಔಡುಲೋಮಿ, ಬೋಧಾಯನರೇ ಮೊದಲಾದ ಮಹರ್ಷಿಗಳೂ ಟಂಕ, ಗುಹದೇವ, ಕಪರ್ದಿ, ದ್ರವಿಡಾಚಾರ್ಯರೇ ಮೊದಲಾದ ಪೂರ್ವಸೂರಿಗಳೂ ಶ್ರೀಮನ್ನಾಥಮುನಿಗಳೂ ಭಗವದ್ಯಾಮುನಾಚಾರ್ಯರೂ ಶ್ರೀರಾಮಾನುಜಾಚಾರ್ಯರೂ ಸಂರಕ್ಷಿಸಿದರು. "ಆಪಾದಚೂಡಮನಪಾಯಂ" ಎಂದು ವೇದಾನ್ತಾಚಾರ್ಯರು ವರ್ಣಿಸಿರುವಂತೆ ಈ ದರ್ಶನದಲ್ಲಿ ಆಮೂಲಾಗ್ರವಾಗಿ ಪರಿಶೋಧಿಸಿದರೂ ಒಂದು ದೋಷವೂ ಕಾಣಬರುವುದಿಲ್ಲ. ಪರಬ್ರಹ್ಮಕ್ಕೇ ಅಜ್ಞಾನ ಸಂಸಾರ ಬಂಧ ಮೋಕ್ಷಗಳನ್ನು ಕಲ್ಪಿಸುವ ದರ್ಶನಗಳಿವೆ. ಅಜ್ಞಾನ ತಿಮಿರಾದಿತ್ಯನೂ ವಿಜ್ಞಾನಾಂಬುಧಿಚಂದ್ರಮನೂ ಭಕ್ತಿಸುಲಭನೂ ಸ್ವಾರಾಧ್ಯನೂ ಶ್ರಿಯಃಪತಿಯೂ ಸರ್ವಸುಲಭನೂ ಸುಶೀಲನೂ ಆಶ್ರಿತವತ್ಸಲನೂ ಆದ ಶ್ರೀಮನ್ನಾರಾಯಣನೇ ಪರದೇವತೆ (ಪರತತ್ತ್ವ), ಅವನ ಪಾದಾರವಿಂದದಲ್ಲಿ ಶರಣಾಗತಿ ಮಾಡುವುದೇ ಹಿತ, ಅವನ ನಿತ್ಯ ಕೈಂಕರ್ಯ ಪ್ರಾಪ್ತಿಯೇ ಪರಮ ಪುರುಷಾರ್ಥವೆಂದು ಈ ದರ್ಶನ ಸಾರುತ್ತದೆ. ಶ್ರೀಮನ್ನಾಥಮುನಿಗಳಿಂದ ಪುನರ್ಜನ್ಮವನ್ನು ಪಡೆದ, ಸರ್ವ ವಿಧವಾದ ತಮಸ್ಸನ್ನೂ ಪರಿಹರಿಸುವ ಈ

ದರ್ಶನವನ್ನು **ಶ್ರೀ ಆಳವಂದಾರ್** ಎಂಬ ಪರಮಾಚಾರ್ಯರಾದ ಶ್ರೀ ಯಾಮುನಮುನಿಗಳು ತಮ್ಮ ಆಗಮಪ್ರಾಮಾಣ್ಯ, ಸಿದ್ಧಿತ್ರಯಂಮೊದಲಾದ ಗ್ರಂಥಗಳಿಂದ ಬಹುವಿಧವಾಗಿ ಬೆಳೆಸಿದರು. ಇದನ್ನು ಭಗವದ್ರಾಮಾನುಜಾಚಾರ್ಯರು ನವನಿಧಿಗಳಂತಿರುವ ತಮ್ಮ ಗ್ರಂಥರತ್ನಗಳಿಂದಲೂ ಉಪದೇಶ ಸಂಚಾರಾನುಷ್ಠಾನಗಳಿಂದಲೂ ಚೆನ್ನಾಗಿ ಕಾಪಾಡಿದರು. ಈ ಉಪಕಾರವನ್ನು ಎಲ್ಲರಿಗೂ ತಿಳಿಸಬೇಕೆಂದೇ ಶ್ರೀ ರಂಗನಾಥನು ನಮ್ಮ ಈ ಪರಮ ವೈದಿಕ ದರ್ಶನಕ್ಕೆ " **ಶ್ರೀ ರಾಮಾನುಜ ದರ್ಶನ** " (ಎಂಬೆರುಮಾನಾರ್ ದರ್ಶನಂ) ಎಂದು ಹೆಸರಿಟ್ಟರೆಂದು ಶ್ರೀಮದ್ವರವರಮುನಿಗಳು **ಉಪದೇಶ ರತ್ನಮಾಲಾ** ಎಂಬ ಗುರುಪರಂಪರಾ ಸಾರಸಂಗ್ರಹ ರೂಪವಾದ ತಮ್ಮ ಪ್ರಬಂಧದಲ್ಲಿ (೩೮ನೇ ಪದ್ಯದಲ್ಲಿ) ಹಾಡಿದಾರೆ.

"ಗುರು ಪರಂಪರಾ ಪ್ರಭಾವ"ದಿಂದ ತಿಳಿದುಬರುವಂತೆ "ತಿರುಕ್ಕೋಟ್ಟಿಯೂರ್‌ನಂಬಿ"ಎಂಬ ಶ್ರೀಗೋಷ್ಠೀಪೂರ್ಣರು ಶ್ರೀರಾಮಾನುಜಾಚಾರ್ಯರ ಅಪಾರ ಕರುಣೆ ಉದಾರ ಹೃದಯಗಳಿಗೆ ಮೆಚ್ಚಿ "ವೈದಿಕೋತ್ತಮ ಸಿದ್ಧಾಂತ"ವಾದ ಈ ವಿಶಿಷ್ಟಾದ್ವೈತ ದರ್ಶನಕ್ಕೆ " **ಶ್ರೀ ರಾಮಾನುಜಾರ್ಯ ಮತ** "ವೆಂದು ಹೆಸರಿಟ್ಟರೆಂದೂ ಹೇಳುತ್ತಾರೆ. ಹದಿನೆಂಟು ಸಲ ಶ್ರೀರಂಗದಿಂದ ಅತಿ ಪ್ರಯಾಸದಿಂದ ಶ್ರೀ ಗೋಷ್ಠೀಪುರಿಗೆ ಶ್ರೀ ರಾಮಾನುಜರು ಬಂದು ಆಶ್ರಯಿಸಿದ ಮೇಲೂ ಅವರನ್ನು ಚೆನ್ನಾಗಿ ಪರೀಕ್ಷಿಸಿ, "ಈ ರಹಸ್ಯವನ್ನು ಮತ್ತಾರಿಗೂಹೇಳುವುದಿಲ್ಲ" ಎಂಬ ಪ್ರತಿಜ್ಞೆಯನ್ನು ಅವರಿಂದ ಮಾಡಿಸಿಕೊಂಡ ಮೇಲೆ ಶ್ರೀ ಗೋಷ್ಠೀಪೂರ್ಣರು ಅವರಿಗೆ ಚರಮಶ್ಲೋಕಾರ್ಥವನ್ನು ಉಪದೇಶಿಸಿದರು. ಅಪಾರ ಕರುಣಾಸಾಗರರಾದ ಶ್ರೀ ರಾಮಾನುಜರಿಗೆ ಆ ಅರ್ಥವನ್ನು ಕೇಳಿ ಬಹಳ ಸಂತೋಷವಾಯಿತು; ಇದರಿಂದ ಸಕಲ ಚೇತನರೂ ಉಜ್ಜೀವಿಸಬಹುದೆಂದು ಭಾಸವಾಯಿತು. ಆದುದರಿಂದ ಸಂಸಾರಿಗಳ ದುರ್ಗತಿಯನ್ನೂ, ಶೋಕವನ್ನೂ ಅನರ್ಥವನ್ನೂ ಕಂಡು ಮರುಗಿದ, ದಯಾರ್ದ್ರಹೃದಯರಾದ, ಶ್ರೀ ರಾಮಾನುಜ ಯೋಗಿರಾಜರು ತಮ್ಮ ಪರಮ ಕೃಪೆಯಿಂದ ತಮ್ಮನ್ನು ಆಶ್ರಯಿಸಿದವರಿಗೆ ತಾವು ಆಚಾರ್ಯರಿಂದ ಪಡೆದ ಅಪೂರ್ವಾರ್ಥವನ್ನು ಅವರ ಅಪ್ಪಣೆಯನ್ನೂ ಮೀರಿ ಉಪದೇಶಿಸಿದರು. ಈ ಘಟನೆ ತಿರುಕ್ಕೋಟ್ಟಿಯೂರಿನ ಮಹಾ ಮಂದಿರದ ಗೋಪುರದ ಮೇಲೆ ನಡೆಯಿತು.

ಇದರ ನೆನಪಿಗಾಗಿ ಆ ಗೋಪುರದಲ್ಲಿ ಶ್ರೀ ರಾಮಾನುಜರ ಮೂರ್ತಿಯನ್ನು ನಿರ್ಮಿಸಿದ್ದಾರೆ. ಈಗ ಜೀರ್ಣೋದ್ಧಾರವಾಗಿರುವ ಈ ಗೋಪುರವನ್ನು ಎಲ್ಲರೂ ನೋಡಿ ಧನ್ಯರಾಗಬಹುದು. ತಮ್ಮ ಮಾತನ್ನು ಮೀರಿ ಇತರರಿಗೆ ಉಪದೇಶಿಸಿದ ಸುದ್ದಿಯನ್ನರಿತು ಶ್ರೀ ಗೋಷ್ಠೀಪೂರ್ಣರು ರಾಮಾನುಜರನ್ನು ಕರೆಯಿಸಿ "ನೀವು ಹೀಗೆ ಮಾಡಬಹುದೋ? ಇದಕ್ಕೆ ಶಿಕ್ಷೆ ನಿಮಗೆ ತಿಳಿಯದೋ?" ಎಂದು ಕೇಳಿದರು. ಆಗ ವಿನಯವೇ, ಸೌಜನ್ಯವೇ, ಮೂರ್ತಿವೆತ್ತಂತೆ ಅವತರಿಸಿದ್ದ ಶ್ರೀಭಾಷ್ಯಕಾರರು ಆಚಾರ್ಯರಿಗೆ ನಮಿಸಿ ಕೈಮುಗಿಯುತ್ತಾ ಇಂತು ಬಿನ್ನವಿಸಿದರು:—"ತಮ್ಮ ಮಾತನ್ನು ಮೀರಿದ ನನಗೆ ನಿತ್ಯವೂ ನರಕವಾಸವೇ ಎಂದು ಬಲ್ಲೆ." "ಅದನ್ನರಿತೂ ಹೀಗೇಕೆ ಮಾಡಿದಿರಿ?" ಎಂದು ಆಚಾರ್ಯರು ಕೇಳಿದರು. ಅದಕ್ಕೆ ಶ್ರೀರಾಮಾನುಜರು ಮತ್ತೆ ಹೀಗೆ ವಿನಯದಿಂದ ವಿಜ್ಞಾಪಿಸಿದರು:—"ತಮ್ಮ ಮಾತನ್ನು ಮೀರಿ ನಾನೊಬ್ಬನು ನರಕಕ್ಕೆ ಹೋಗಿ ಅಲ್ಲಿ ಸದಾ ನೆಲೆಸಲು ಸಿದ್ಧನಾಗಿದೇನೆ. ಆದರೆ ತಮ್ಮ ಸಂಬಂಧದಿಂದ ಈ ಲೋಕದ ಸಮಸ್ತ ಜೀವಿಗಳೂ ಉಜ್ಜೀವಿಸುವರು, ಉದ್ಧಾರ ಹೊಂದುವರು" ಎಂಬ ನಂಬಿಕೆಯಿಂದ ಈ ಸಂಸಾರಿಗಳ ಅನರ್ಥವನ್ನು ಕಂಡು ಸಹಿಸಲಾರದೆ ಈ ಆಜ್ಞೋಲ್ಲಂಘನೆ ಮಾಡಿದ ಈ ದಾಸನನ್ನು ತಾವು ದಯೆಗೈದು ಕ್ಷಮಿಸಬೇಕು" ಎಂದು ನುಡಿದು ನಮಸ್ಕರಿಸಿದರು. ಇದನ್ನು ಕೇಳಿ ನಂಬಿಗಳಿಗೆ ಪರಮಾನಂದವಾಯಿತು! ರೋಮಾಂಚವಾಯಿತು! ಸಂತೋಷಾತಿರೇಕದಿಂದ ಅವರು ತಮ್ಮ ಶಿಷ್ಯರತ್ನವನ್ನು ಮೇಲಕ್ಕೆತ್ತಿ ಆಲಿಂಗಿಸಿಕೊಂಡು ಇಂತೆಂದರು:—"ಅವರೋ ನೀವು? ಇನ್ನು ಮುಂದೆ ಪರಮ ವೈದಿಕ ಸಿದ್ಧಾಂತವೆಂದು ಹೆಸರು ಪಡೆದಿದ್ದ ನಮ್ಮ ದರ್ಶನ "ಎಂಬೆರುಮಾನಾರ್ ದರ್ಶನಂ", ಶ್ರೀ ರಾಮಾನುಜ ದರ್ಶನಂ ಎಂದು ನಿಮ್ಮ ಹೆಸರಿಂದ ಕಂಗೊಳಿಸುವುದು! ಹೀಗೆ "ವಿಶಿಷ್ಟಾದ್ವೈತಸಿದ್ಧಾಂತ" ರಾಮಾನುಜ ಸಿದ್ಧಾಂತವಾಯಿತು.

# ೩. ಶ್ರೀವೈಷ್ಣವರು ಉಭಯವೇದಾನ್ತ ಪ್ರವರ್ತಕರು ಮತ್ತು ಪ್ರಪನ್ನರು

"**ಶ್ರೀಮದ್ವೇದಮಾರ್ಗ ಪ್ರತಿಷ್ಠಾಪನಾಚಾರ್ಯ ಉಭಯವೇದಾಂತ ಪ್ರವರ್ತಕರಾಯ್** ಶಾನ್ತಿಶಮದಮಾದ್ಯಾತ್ಮಗುಣೋಪೇತರಾಯ್....ಎಳು. ಪರುಳಿಯಿರುಕ್ಕುಂ ಶ್ರೀ ಸ್ವಾಮಿ ಸನ್ನಿಧಿಯಿಲ್ ಅಡಿಯೇನ್ ರಾಮಾನುಜ ದಾಸನ್ ದಂಡನಿಟ್ಟು ಶೆಯ್ಯುಂ ವಿಣ್ಣಪ್ಪಂ "ಎಂದು ಶ್ರೀ ವೈಷ್ಣವರಲ್ಲಿ ಬಹು ಕಾಲದಿಂದಲೂ ಶ್ರೀಮುಖ (ಕಾಗದಗಳನ್ನು) ಬರೆಯುವಾಗ ಆರಂಭಿಸುವ ಪದ್ಧತಿ ಇದೆ. ಈ ಒಕ್ಕಣೆಯ ಮೊದಲಲ್ಲಿರುವ "**ಶ್ರೀಮದ್ವೇದಮಾರ್ಗ ಪ್ರತಿಷ್ಠಾಪನಾಚಾರ್ಯ**"ರೆಂಬ ಬಿರುದು ಸರ್ವಥಾ ಯತಿರಾಜ ಸಾರ್ವಭೌಮ ರಾದ ನಮ್ಮ ಶ್ರೀ ರಾಮಾನುಜಾಚಾರ್ಯರಿಗೇ ಒಪ್ಪುತ್ತದೆ. "**ತಿರುಮ್ಲಾಲವರ್ ಕವಿ**", "**ತಿರುಮಾಮಹಳಾಲದುಳ್‌ಮಾರಿ**" ಎಂದು ಪ್ರಸಿದ್ಧ ರಾಗಿರುವ, ಶ್ರೀಮನ್ನಾರಾಯಣನ ವಿಶೇಷಕಟಾಕ್ಷಕ್ಕೆ ಪಾತ್ರರಾದ, **ಶ್ರೀಮತ್ಪರಾಂಕುಶಮುನಿ ಪರಕಾಲ** ಕವಿವರ್ಯರ ಪಾದಗಳನ್ನು ಆಶ್ರಯಿಸಿ ಉಜ್ಜೀವಿಸಿ ಅವರ ದಿವ್ಯ ಸೂಕ್ತಿಗಳ ಅಮೃತಪಾನದಿಂದ ಮೈಮರೆತು, ಪರವಾದಿಗಳನ್ನು ಜಯಿಸಿ, ವೇದದ ಒಳಪುರುಳಾಗಿ ಬೆಳಗುವ ಪರಂಜ್ಯೋತಿಯಾದ ಶ್ರೀಮನ್ನಾರಾಯಣನೇ ಪರದೇವತೆ, ಅವನ ಸೇವೆಯೇ ಪುರುಷಾರ್ಥವೆಂದೂ ಸಪ್ತ ದ್ವೀಪ ವತಿಯಾದ ಭೂಮಂಡಲದಲ್ಲಿರುವವರು ಎಲ್ಲರೂ ಶ್ರೀಮನ್ನಾರಾಯಣನ ಮಕ್ಕಳು, ನಾವೆಲ್ಲರೂ ನೋದರರು, ಆಚಾರ್ಯನೇ ನಮಗೆ ಚರಮೋಪಾಯ ಮತ್ತು ಅವನ ಕೈಂಕರ್ಯವೇ ಪರಮಪುರುಷಾರ್ಥವೆಂದೂ ಉಪದೇಶಿಸಿ ಶರಣಾ ಗತಿ ಧರ್ಮವನ್ನು ಎಲ್ಲರೂ ಯಾವಾಗಲೂ ಅವಲಂಬಿಸಿ ಉಜ್ಜೀವಿಸಬಹು ದೆಂದೂ ತೋರಿಸಿಕೊಟ್ಟರು. "ಪಂಗುನ್ಯುತ್ತರಂ" ಉತ್ಸವದ ದಿನ(ಮಹಾಲಕ್ಷ್ಮಿ ಆವಿರ್ಭವಿಸಿದ ಸುದಿನ)ವಲ್ಲಿ ಶ್ರೀರಂಗದಲ್ಲಿ ಬಿಜಯಮಾಡಿಸಿರುವ ದಿವ್ಯ ದಂಪತಿ ಗಳ ಸನ್ನಿಧಿಯಲ್ಲಿ ಶರಣಾಗತಿಮಾಡಿ ಸಕಲ ಜೀವಾತ್ಮಗಳಿಗೂ ತಮ್ಮ ಫಲ ಲಭಿ ಸುವಂತೆ ಅನುಗ್ರಹಿಸಿದರು. ಅಂದು ಭಗವಂತನಿಗೂ ಆಚಾರ್ಯರಿಗೂ ನಡೆದ ಸಂವಾದವೇ "**ಗದ್ಯತ್ರಯ**"ವೆಂದು ಪ್ರಸಿದ್ಧವಾಗಿದೆ. "**ಉಯಿರಳಿಪ್ಪಾನ್**

ಎನ್ನಿನ್ನ ಯೋನಿಯುಮಾಯ್ಪ್ಪಿರಂದಾಯ್ **ಇಮ್ಮೈಯೋರ್ ತಲೈವಾ,** ಮೆಯ್ ನಿನ್ರು ಕೇಟ್ಟರುಳಾಯ್! ಅಡಿಯೇನ್ ಶೆಯ್ಯುಂ ವಿಣ್ಣಪ್ಪಮೇ'' ಎಂಬ **ತಿರುವಿರುತ್ತಂ** ಮೊದಲನೇ ಪದ್ಯದಲ್ಲಿ ಕಲಿಯುಗಾದಿಯಲ್ಲಿ ಪಾಂಡ್ಯ ದೇಶದ ತಿರುಕ್ಕುರುಹೂರಿನಲ್ಲಿ ಅವತರಿಸಿದ ನಮ್ಮಾಳ್ವಾರ್‌ರವರು ಮೊದಲು ಭಗವತ್ಸನ್ನಿಧಿಯಲ್ಲಿ ಬಿನ್ನವಿಸಿ, ಆ ಮೇಲೆ ಕೇಶವನ್ "ತಮರ್‌ಹಳ್" ಎಂಬ ತಿರುವಾಯ್ಮೊಳಿ. (ಸಿರಿಬಾಯ ನುಡಿ : ೧೬ನೇ ಗೀತೆ)ಯಲ್ಲಿ ತಮ್ಮ ಸಂಬಂಧ ಸಂಬಂಧಿಗಳೂ ಈ ಸಂಸಾರ ಪರಂಪರೆಯನ್ನು ನೀಗಿ ಅಂತವಿಲ್ಲದ ಪೇರಾನಂದ ವನ್ನು ಹೊಂದುವಂತೆ ಭಗವಂತನು ಅನುಗ್ರಹಿಸಿದನೆಂದು ಹಾಡಿದಾರೆ. ಆಳ್ವಾರೊಬ್ಬರೇ ಭಗವಂತನಲ್ಲಿ ಪ್ರಾರ್ಥಿಸಿದರು, ಆದರೆ ಫಲದೆಶೆಯಲ್ಲಿ "**ಇನಿ ಯೊಮುರಾಮ್ಮೈ**'' ಎಂಬ ತಮ್ಮ ಅಭಿಮಾನಪಾತ್ರರಾದ ಎಲ್ಲರನ್ನೂ ಅವರು ಸೇರಿಸಿಕೊಂಡಿರುವುದು ಚೇತನರ ಉಜ್ಜೀವನದಲ್ಲಿ ಅವರಿಗಿರುವ ಆಸ್ಥೆ ಯನ್ನೂ ಅವರ ಅಪಾರಕಾರುಣ್ಯವನ್ನೂ ಪ್ರಕಟಿಸುತ್ತದೆ. ಅವರಿಂದ ಏಳ ನೆಯವರಾದ ಶ್ರೀ ರಾಮಾನುಜಾಚಾರ್ಯರು **ಶರಣಾಗತಿ ಗದ್ಯ, ಶ್ರೀರಂಗ ಗದ್ಯ,** ಮತ್ತು **ಶ್ರೀ ವೈಕುಂಠ ಗದ್ಯ** ಎಂಬ ಮೂರು ಗದ್ಯಗಳಲ್ಲಿಯೂ ಕರ್ಮ ಜ್ಞಾನ ಭಕ್ತಿಗಳೊಂದೂ ಇಲ್ಲದ **ಆಕಿಂಚನರಾದ, ಅನನ್ಯಗತಿಗಳಾದ** ನಮಗೆ ಭಗವಂತನ ಶರಣಾಗತಿಯೇ ಅವನ ಸೇವೆಗೆ ಸ್ವರೂಪಾನುರೂಪ ವಾದ, ಅವಿಳಂಬ್ಯಫಲಪ್ರದವಾದ ಮತ್ತು ಆಚಾರ್ಯರುಚಿಪರಿಗೃಹೀತವಾದ ಉಪಾಯವೆಂದು ತಿಳಿಸಿದಾರೆ. ಶ್ರೀ ರಾಮಾನುಜಾರ್ಯರ ಶರಣಾಗತಿಗದ್ಯಕ್ಕೆ **ಶ್ರುತಪ್ರಕಾಶಿಕಾಚಾರ್ಯರಾದ** ಶ್ರೀ ಸುದರ್ಶನಸೂರಿಗಳೇ ಸಂಸ್ಕೃತದಲ್ಲಿ ವ್ಯಾಖ್ಯಾನವನ್ನು ರಚಿಸಿದಾರೆ. ಲಕ್ಷ್ಮೀಪ್ರಪತ್ತಿಯನ್ನು ಮೊದಲು ಆಚಾ ರ್ಯರು ಮಾಡಿದರು. "**ಅಸ್ತು ತೇ, ತಯೈವ ಸರ್ವಂ ಸಂಪತ್ಸ್ಯತೇ**"ಎಂಬುದು ಶ್ರೀ ಮಹಾಲಕ್ಷ್ಮಿಯ ಪ್ರತಿವಚನ. ಅದಕ್ಕೆ "ಸಂಬಂಧಿ ಸಂಬಂಧಿ ನಿಸ್ತರಣ ಮಪಿ ಅತ್ರಾಭಿಪ್ರೇತಂ" ಎಂದು ಶ್ರುತಪ್ರಕಾಶಿಕಾಚಾರ್ಯರು ಹೇಳಿರು ವುದನ್ನು ಶ್ರೀ ವೇಂಕಟನಾಥಾಚಾರ್ಯರೂ ಅನುಮೋದಿಸಿದಾರೆ. ಇದನ್ನೇ ಸ್ಪಷ್ಟವಾಗಿ ಅವರು "**ನ್ಯಾಸತಿಲಕ**"ದ ಇಪ್ಪತ್ತೆರಡನೆಯ ಪದ್ಯದಲ್ಲಿ ವಿವರಿಸಿ ದ್ದಾರೆ.

ಉಕ್ತ್ವಾ ಧನಂಜಯವಿಭೀಷಣಲಕ್ಷ್ಯಯಾ ತೇ
ಪ್ರತ್ಯಾಯ್ಯ ಲಕ್ಷ್ಮಣಮುನೇರ್ಭವತಾ ವಿತೀರ್ಣಂ ।
ಶ್ರುತ್ವಾ ವರಂ ತದನುಬಂಧ ಮದಾವಲಿಪ್ತೇ
ನಿತ್ಯಂ ಪ್ರಸೀದ ಭಗವನ್ಮಯಿ ರಂಗನಾಥ ॥

ಎಂಬೆರುಮಾನಾರ್, ಉಡೈಯವರ್, ಯತಿರಾಜರ್, ಸಂಯಮಿ ಸಾರ್ವಭೌಮರ್ ಎಂಬ ಪ್ರಸಿದ್ಧರಾದ ಭಗವದ್ರಾಮಾನುಜಾರ್ಯರ ಸಾಕ್ಷಾತ್ ಶಿಷ್ಯರಾದ, ಆತ್ರೇಯ ಗೋತ್ರದ "**ಕಡಾಂಬಿ ಆಚ್ಚಾನ್**" ಎಂಬ ಯತಿರಾಜರ ಮಾಹಾನಸಿಕರ ಸಂತತಿಯಲ್ಲಿ ಅವತರಿಸಿದ, **ಆತ್ರೇಯ ರಾಮಾನುಜಾರ್ಯ** (ಕಡಾಂಬಿ ಅಪ್ಪುಳಾರ್, ವಾದಿಹಂಸಾಂಬುದಾರ್ಯ) ಎಂಬ ಮಹಾನುಭಾವರ ಬಳಿ ವೇದಾನ್ತಾಚಾರ್ಯರ ವಿದ್ಯಾಭ್ಯಾಸ ನಡೆಯಿತು. ಅವರ ಅನುಗ್ರಹಕ್ಕೆ ಪಾತ್ರರಾಗಿರುವುದರಿಂದ ತಮಗೆ ಭಗವಂತನು ಪ್ರಸನ್ನನಾಗುವನೆಂದು ನಂಬಿದ್ದರಿಂದಲೇ ಹೀಗೆ ಕಂಠೋಕ್ತವಾಗಿ ವೇದಾನ್ತಾಚಾರ್ಯರು

ಮಿಥ್ಯಾಪ್ರಪನ್ನಮಪಿಮಾಂ ಅವಲೋಕಯತ್ವಂ
ಲಕ್ಷ್ಮೀಂ ಕ್ಷಮಾಮಪಿ ಗುರೂನವಲೋಕ್ಯಪೂರ್ವಾನ್

ಎಂದು ಹೇಳಿದಾರೆ.

ಇದನ್ನೇ ಶ್ರೀವರವರಮುನಿಗಳು "**ಯತಿರಾಜವಿಂಶತಿ**"ಯ ೧೮ನೇ ಪದ್ಯದಲ್ಲಿ ಸರಳವಾಗಿ ವಿವರಿಸಿದಾರೆ :—

ಕಾಲತ್ರಯೇಪಿ ಕರಣತ್ರಯನಿರ್ಮಿತಾತಿ
ಪಾಪಕ್ರಿಯಸ್ಯ ಶರಣಂ ಭಗವತ್‍ಕ್ಷಮೈವ ।
**ಸಾ ಚ ತ್ವಯ್ಯೈವ ಕಮಲಾರಮಣೇಽರ್ಥಿತಾ ಯತ್
ಕ್ಷೇಮಸ್ಸಏವ ಹಿ ಯತೀಂದ್ರ ! ಭವತ್‍ಶ್ರಿತಾನಾಂ.**

ಇದರ ತಾತ್ಪರ್ಯವಿದು :– ಈ ಚೇತನನು ಮೂರು ಕಾಲಗಳಲ್ಲಿಯೂ (ಸದಾ) ಮೂರು ಕರಣ (ಸರ್ವೇಂದ್ರಿಯ)ಗಳಿಂದಲೂ ಮಾಡುತ್ತಿರುವ ಪಾಪರಾಶಿ ಅಪಾರವಾದುದು. ಇದರ ಪರಿಹಾರವನ್ನು ಮಾಡಬಲ್ಲವನು

"ಪಾಪನಾಶನಾದ ಪಂಕಜಾಕ್ಷನೇ" [ತಿರುವಾಯ್ಮೊಳಿ.—೨-೬-೨] ಆ ಸಮಸ್ತ ಕಲ್ಯಾಣಗುಣಾಕರನಾದ ಭಗವಂತನ ಕ್ಷಮೆಯೇ ಪಾಪಿಗಳಾದ ನಮಗೆ ಶರಣ, ಗತಿ. ಆ ಕ್ಷಮೆಯನ್ನು ತಾವೇ ಕಮಲಾರಮಣನಾದ ಶ್ರೀರಂಗನಾಥನ ಸನ್ನಿಧಿಯಲ್ಲಿ ಶರಣಾಗತಿ ಮಾಡಿ ಪ್ರಾರ್ಥಿಸಿರುವಿರಲ್ಲವೇ ! ಆದುದರಿಂದ, ಯತಿರಾಜರೇ, ತಮ್ಮನ್ನು ಆಶ್ರಯಿಸಿದವರಿಗೆಲ್ಲ ಅದೇ **ಕ್ಷೇಮ".** "**ಕ್ಷೇಮಂಕರಾಯ ಸರ್ವೇಷಾಂ ಶ್ರೀರಂಗೇಶಾಯ ಮಂಗಳಂ"** ಎನ್ನುವಂತೆ ಸರ್ವಭೂತ ಸುಹೃತ್ತಮನಾದ ಶ್ರೀಮನ್ನಾರಾಯಣನ ಕೃಪೆಯೇ ನಮಗೆ ಕ್ಷೇಮವೆಂದು "ಶೇಮಂ ಶೆಂಗೋನರುಳೇ "ಎಂಬ ನಮ್ಮಾಳ್ವಾರವರ ಶ್ರೀ ಸೂಕ್ತಿಯಿಂದ (ತಿರು ವಿರುತ್ತಂ—೨೭) ವ್ಯಕ್ತವಾಗುತ್ತದೆ. ನಾವೇನನ್ನೂ ಮಾಡಬೇಕಾಗಿಲ್ಲ, ನಮಗಾಗಿ ರಾಮಾನುಜರು ಪ್ರಪತ್ತಿ ಮಾಡಿದ್ದಾರೆ, ನಾವು ಅವರ ಸಂಬಂಧದಿಂದ ಅನಾಯಾಸವಾಗಿ ಮುಕ್ತಿ ಸಾಮ್ರಾಜ್ಯವನ್ನು ಪಡೆಯಬಹುದೆಂದು ಇದರಿಂದ ತಿಳಿಯಬರುತ್ತದೆ. "**ನ್ಯಾಸ ತಿಲಕದ"** ೨೧ನೇ ಪದ್ಯದಲ್ಲಿ ಶ್ರೀ ವೇದಾಂತಾಚಾರ್ಯರು ಈ ಅಭಿಪ್ರಾಯವನ್ನು ಅನುಮೋದಿಸಿದಾರೆ –

"ಭುಂಕ್ತೇ ಭೋಗಾನವಿದಿತನೃಪಃ ಸೇವಕಸ್ಯಾರ್ಭಕಾದಿಃ
ತ್ವತ್ಸಂಪ್ರಾಪ್ತೌ ಪ್ರಭವತಿ ತಥಾ ದೇಶಿಕೋ ಮೇ ದಯಾಳುಃ "

ರಾಜಪುರೋಹಿತನ ಮತ್ತು ರಾಜಸೇವಕರ ಮನೆಯವರೆಲ್ಲರೂ ರಾಜನನ್ನು **ನೋಡದೆ** ಇದ್ದರೂ ಅವನ ಸೇವೆ ಮಾಡದೆ ಇದ್ದರೂ ಆ ರಾಜನ ಸಂಬಂಧವಿರುವ ಮನುಷ್ಯನ ಸಂಬಂಧದಿಂದಲೇ ಆ ರಾಜನಿತ್ತ ಸಕಲಭೋಗ **ಭಾಗ್ಯ**ಗಳನ್ನೂ ಅನುಭವಿಸುವಂತೆ ಶ್ರೀರಾಮಾನುಜಾಚಾರ್ಯರ ಪಾದ ಸಂಬಂಧವೆಂಬ "**ರಾಜಕುಲಮಾಹಾತ್ಮ್ಯ"ದ ಬಲದಿಂದ** ನಾವು ನಿರ್ಭರರಾಗಿ ನಿರ್ಭಯದಿಂದ ಸುಖವಾಗಿರುವೆವೆಂಬ ಸಂತೃಪ್ತಿಯುಳ್ಳ ಶ್ರೀವೈಷ್ಣವರು ಬ್ರಹ್ಮ ಪದವಿಯನ್ನೂ ಆಶಿಸುವುದಿಲ್ಲ. ಆದುದರಿಂದ ಈ ಮುಕ್ತಕವನ್ನು ಗದ್ಯತ್ರಯ ಪಾರಾಯಣ ಮಾಡುವಾಗ ಶ್ರೀ ಯಾದವಗಿರಿನಾರಾಯಣನ ಮಂದಿರದಲ್ಲಿ ಅಧ್ಯಾಪಕರು ಪಠಿಸುತ್ತಾರೆ: —

ತೃಣೀಕೃತವಿರಿಂಚಾದಿನಿರಂಕುಶವಿಭೂತಯಃ ।
ರಾಮಾನುಜಪದಾಂಭೋಜಸಮಾಶ್ರಯಣಶಾಲಿನಃ ॥

ಈ ಮಹಾತ್ಮರ ಸಂಬಂಧವಿದ್ದುದರಿಂದಲೇ ವೇದಾನ್ತಾಚಾರ್ಯರು ವಿದ್ಯಾರಣ್ಯರು ಕರೆದರೂ ವಿಜಯನಗರಕ್ಕೆ ಹೋಗಲಿಲ್ಲ; ವೈರಾಗ್ಯಪಂಚಕವನ್ನು ರಚಿಸಿ ತಮ್ಮ ಸ್ವರೂಪ ಯಾಥಾತ್ಮ್ಯಜ್ಞಾನ ಭಕ್ತಿ ವೈರಾಗ್ಯಗಳನ್ನು ಪ್ರಕಟಿಸಿದರು.

ನಾಸ್ತಿ ಪಿತ್ರಾರ್ಜಿತಂ ಕಿಂಚಿನ್ನಮಯಾ ಕಿಂಚಿದಾರ್ಜಿತಂ ।
ಅಸ್ತಿ ಮೇ ಹಸ್ತಿಶೈಲಾಗ್ರೇ ವಸ್ತು ಪೈತಾಮಹಂ ಧನಂ ॥

"ತವದಾಸ್ಯಮಹಾರಸಜ್ಞಃ" ಎಂದು ತಮ್ಮನ್ನು ತಾವೇ ವರ್ಣಿಸಿಕೊಂಡಿರುವ ಶ್ರೀವತ್ಸಾಂಕಮಿಶ್ರರಂತೆ ವೇದಾನ್ತಾಚಾರ್ಯರೂ ವೈರಾಗ್ಯ ಚಕ್ರವರ್ತಿಗಳು. ಆಳವಂದಾರ್, ಎಂಬೆರುಮಾನಾರ್, ಕೂರತ್ತಾಳ್ವಾರ್, ಪರಾಶರ ಭಟ್ಟರ್, ಇತ್ಯಾದಿ ಪೂರ್ವಾಚಾರ್ಯರ ಶ್ರೀ ಸೂಕ್ತಿಗಳನ್ನು ಅನುಸರಿಸಿಯೇ ವೇದಾನ್ತಾಚಾರ್ಯರ ಸೂಕ್ತಿಗಳೆಲ್ಲಾ "ಪೇಶಿತ್ತೇಪೇಶುಂಪಕಕಂಠರ್‌ಹಳ್" ಎನ್ನುವಂತೆ ಪರಸ್ಪರ ಪೂರಕ ಪೋಷಕ ಅಥವಾ ವಿವರಣರೂಪವಾಗಿವೆ; ಪುನರುಕ್ತಿಯೆಂದು ಆಪಾತತಃ ತೋರಿದರೂ ಒಂದು ಅಪೂರ್ವಾರ್ಥ ಪ್ರತಿಯೊಂದರಲ್ಲೂ ಅಡಕವಾಗಿದೆ. ಇದನ್ನು ಸದಾಚಾರ್ಯಾನುವರ್ತನದಿಂದಲೇ ಅರಿಯಬೇಕು.

## ೪ ರಹಸ್ಯಗ್ರಂಥಗಳು

ನಮ್ಮ ವಿಶಿಷ್ಟಾದ್ವೈತಸಂಪ್ರದಾಯದಲ್ಲಿ ಶ್ರೀಮನ್ನಾಥಮುನಿಗಳ ಕಾಲದಿಂದ ಉಪದೇಶಪರಂಪರಾಪ್ರಾಪ್ತವಾಗಿ ಬಂದಿರುವ ಅನೇಕ ಐತಿಹ್ಯಗಳನ್ನೂ ತತ್ತ್ವಾರ್ಥಗಳನ್ನೂ "ಮಣಿಪ್ರವಾಳ" ಶೈಲಿಯಲ್ಲಿ (ಎಂದರೆ ಮುತ್ತು ಹವಳವನ್ನು ಅಂದವಾಗಿ ಪೋಣಿಸಿದಂತೆ ಸಂಸ್ಕೃತ ತಮಿಳು ಶಬ್ದಗಳನ್ನು ಅಂದವಾಗಿ ಸೇರಿಸಿರುವ ಸರಳ ಸುಂದರವಾದ ಸರಣಿಯಲ್ಲಿ) ಪೆರಿಯವಾಚ್ಚಾನ್‌ಪಿಳ್ಳೈ ಎಂಬ ದಿವ್ಯಪ್ರಬಂಧವ್ಯಾಖ್ಯಾನ ಚಕ್ರವರ್ತಿಗಳೂ ಅವರ ಮಕ್ಕಳಾದ ನೈನಾರಾಚ್ಚಾನ್‌ಪಿಳ್ಳೈಯವರೂ, ಪಿಳ್ಳೈಲೋಕಾಚಾರ್ಯರೆಂಬ ಜಗದ್ಗುರುಗಳೂ ಅವರ ತಮ್ಮಂದಿರಾದ ಅಳಗಿಯಮಣವಾಳಪ್ಪೆರುಮಾಳ್ ನಾಯನಾರ್ ಎಂಬುವರೂ ನಾಲೂರಾಚ್ಚಾನ್‌ಪಿಳ್ಳೈ ಎಂಬ ಆಚಾರ್ಯರೂ

ಪರಂದಪಡಿ, ಚರಮೋಪಾಯನಿರ್ಣಯಂ, ಅಷ್ಟಾದಶರಹಸ್ಯಂ, ಆಚಾರ್ಯ ಹೃದಯಂ, ಮತ್ತು ಚರಮೋಪಾಯ ತಾತ್ಪರ್ಯಂ ಮೊದಲಾದ ಕೃತಿಗಳನ್ನು ಸೂತ್ರಗಳ ಶೈಲಿಯಲ್ಲಿ ರಚಿಸಿದಾರೆ. ದ್ರಾವಿಡಾಮ್ನಾಯವೆಂಬ ದಿವ್ಯ ಪ್ರಬಂಧ ಗಳ ತಾತ್ಪರ್ಯರಸಾನುಭವಮಾಡಿದವರಿಗೆ ಮಾತ್ರ ಉಪದೇಶಿಸುವ ಈ ನಿಗೂಢತತ್ವಾರ್ಥನಿಧಿಗಳಿಗೆ ರಹಸ್ಯಗ್ರಂಥಗಳೆಂದು ಹೆಸರು. ಸಂಸ್ಕೃತವನ್ನ ರಿಯದ ಜನರೆಲ್ಲರೂ ಶ್ರೀರಾಮಾನುಜದರ್ಶನದ ಸಾರತಮವಾದ ಅಂಶಗಳ ನ್ನರಿಯಲಿ! ಎಂಬ ಉದಾರ ಹೃದಯದಿಂದ ಪೂರ್ವಾಚಾರ್ಯರುಗಳು ಪರಮ ಕೃಪೆಯಿಂದ ರಚಿಸಿದ ಈ ರಹಸ್ಯಗ್ರಂಥಗಳನ್ನು ಆಚಾರ್ಯರಿಂದ ಕಲಿತು ಅನುಭವಿಸುವುದು ಜೀವನದ ಸೌಭಾಗ್ಯಗಳಲ್ಲಿ ಒಂದು. ವೇದಾನ್ತಾಚಾರ್ಯರೂ ಮಣಿಪ್ರವಾಳಶೈಲಿಯಲ್ಲಿ "ರಹಸ್ಯತ್ರಯಸಾರಂ" ಮೊದಲಾದ ಗ್ರಂಥಗಳನ್ನು ರಚಿಸಿದಾರೆ."ವಿಶದವಾಕ್ ಶಿಖಾಮಣಿಗಳು" ಎಂದು ಪ್ರಸಿದ್ಧರಾದ "ಕೋಯಿಲ್ ಮಣವಾಳಮಾಮುನಿ"ಎಂಬ ಶ್ರೀವರವರಮುನಿಗಳು ಪಿಳ್ಳೈಲೋಕಾಚಾರ್ಯರ "ತತ್ವತ್ರಯಂ" ಎಂಬ ರಹಸ್ಯಗ್ರಂಥಕ್ಕೆ ವ್ಯಾಖ್ಯಾನವನ್ನು ರಚಿಸಿದ್ದಾರೆ; ಅದರಲ್ಲಿ ಲೋಕಾಚಾರ್ಯರ ಸೂಕ್ತಿಗೆ ಪೋಷಕವಾಗಿ "ರಹಸ್ಯತ್ರಯಸಾರ" ದಿಂದ ಕೆಲವು ಭಾಗಗಳನ್ನು ಉದ್ಧರಿಸಿರುವುದು ಉಲ್ಲೇಖಾರ್ಹವಾದ ಸಂಗತಿ. "ಅಭಿಯುಕ್ತ"ರೆಂದು ಗೌರವದಿಂದ ವೇದಾನ್ತಾಚಾರ್ಯರನ್ನು ಸೂಚಿಸಿ, ತಿರುಮನ್ತ್ರಾರ್ಥವಿವರಣ ಮಾಡುವಾಗ, ಶಿಷ್ಯಲಕ್ಷಣವನ್ನು ವರ್ಣಿಸುವಾಗ "ಸದ್ಬುದ್ಧಿಃ ಸಾಧು ಸೇವೀ" ಎಂಬ ಪದ್ಯವನ್ನು ಉದ್ಧರಿಸಿದಾರೆ.

"ಚಿತ್ ಪ್ರಕರಣ" ದ 39ನೇ ಸೂತ್ರ (ಚೂರ್ಣಿಕೆ)ವನ್ನು ವಿವರಿಸು ವಾಗ "ಧಾರ್ಯ" ವಸ್ತುಗಳನ್ನು ಸ್ವರೂಪ ಸಂಕಲ್ಪಗಳೆರಡರಿಂದಲೂ ಧರಿಸುವವನೆನ್ನುವುದು ಅಭಿಯುಕ್ತರಿಂದ ವಿಸ್ತಾರವಾಗಿ ಪ್ರತಿಪಾದಿಸಲ್ಪಟ್ಟಿದೆ ಎಂದು ನಿರೂಪಿಸಿ ಅದು ಹೇಗೆಂದರೆ ಎಂದು ವಿವರಿಸುತ್ತಾ "ಈಶ್ವರನು ತನ್ನ ಸ್ವರೂಪ ನಿರೂಪಿತ ಸ್ವರೂಪ ವಿಶೇಷಗಳಾದ ಗುಣಗಳಂತೆ, ಸ್ವವ್ಯತಿರಿಕ್ತ ಸಮಸ್ತ ದ್ರವ್ಯಗಳಿಗೂ ಅವ್ಯವಹಿತವಾಗಿ ಸ್ವರೂಪೇಣ ಆಧಾರವಾಗಿರುವನು ಎಂದು ಆರಂಭಿಸಿ, ವಿಸ್ತಾರವಾಗಿ ಉಲ್ಲೇಖಿಸಿ "ಹೀಗೆ ರಹಸ್ಯತ್ರಯ ಸಾರದಲ್ಲಿ ಪ್ರತಿಪಾದಿಸಿರುವುದರಿಂದಲೂ ಎಂದು ನಿರ್ಣಯಿಸಿದ್ದಾರೆ. ಹಾಗೆಯೇ "ಅಚಿತ್ತ

ಕರಣ" ದ 5ನೇ ಸೂತ್ರದ ವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ :—
"ಇದು ತಾನೇ ಅಭಿಯುಕ್ತರಿಂದ ವಿಸ್ತಾರವಾಗಿ ಪ್ರತಿಪಾದಿತವಾಗಿದೆ. ಹೇಗೆಂದರೆ :—"ತ್ರಿವಿಧ ಚೇತನಂಗಳ್ ಎನ್ರೆಡುತ್ತು" ಎಂದು ಮೊದಲಾಗುವ ದೊಡ್ಡ ವಾಕ್ಯ ಬೃಂದವನ್ನು ಉದ್ಧರಿಸಿ ಹೀಗೆ ಕೊನೆಯಲ್ಲಿ ನಿರೂಪಿಸಿದ್ದಾರೆ:—

ಧರ್ಮಭೂತಜ್ಞಾನದ ಸ್ವಾತ್ಮ ಪ್ರಕಾಶನ ಶಕ್ತಿ ಪ್ರಕಾಶವಿಲ್ಲದಿದ್ದಾಗ ಕರ್ಮವಿಶೇಷಗಳಿಂದ ಪ್ರತಿಬದ್ಧಿಯಾಗುವಂತೆ, ಶುದ್ಧಸತ್ವದ ಸ್ವಾತ್ಮ ಪ್ರಕಾಶನ ಶಕ್ತಿಯೂ ಬದ್ಧ ದೆಶೆಯಲ್ಲಿ ಪ್ರತಿಬದ್ಧಿಯಾಗುವುದರಿಂದ ಶುದ್ಧ ಸತ್ತ್ವ ಬದ್ಧರಿಗೆ ಪ್ರಕಾಶವಾಗುವುದಿಲ್ಲ.

ಧಿಯಃಸ್ವಯಂಪ್ರಕಾಶತ್ವಂ ಮುಕ್ತೌ ಸ್ವಾಭಾವಿಕಂ ಯಥಾ ।
ಬದ್ಧೇ ಕದಾಚಿತ್ಸಂರುದ್ಧಂ ತಥಾsತ್ರಾಪಿ ನಿಯಾಮ್ಯತೇ ॥

ಇಷ್ಟು ಅವಸ್ಥಾಂತರಾಪತ್ತಿ ವಿಕಾರಿದ್ರವ್ಯಕ್ಕೆ ವಿರುದ್ಧವಲ್ಲ; ಆದುದರಿಂದ ಪ್ರಮಾಣಪ್ರತಿಪನ್ನಾರ್ಥಕ್ಕೆ ಯುಕ್ತಿ ವಿರೋಧವನ್ನು ಹೇಳಲು ದಾರಿಯಿಲ್ಲ" ಎಂದು ಉಲ್ಲೇಖಿಸಿ ಇಂತು ರಹಸ್ಯತ್ರಯಸಾರದಲ್ಲಿ ಪ್ರತಿಪಾದಿಸಿರುವುದರಿಂದ ಎಂದು ನಿಗಮನ ಮಾಡಿದ್ದಾರೆ.

ಈ ವರವರಮುನಿವರ್ಯರು "ಉಪದೇಶರತ್ನಮಾಲೈ" ಎಂಬ ಗುರುಪರಂಪರಾಸಾರಸಂಗ್ರಹ ರೂಪವಾದ ತಮ್ಮ ಪ್ರಬಂಧದಲ್ಲಿ ಶ್ರೀಲೋಕಾಚಾರ್ಯರನ್ನು ಉದ್ದೇಶಿಸಿ ಏಳು ಪದ್ಯಗಳನ್ನು ರಚಿಸಿದಾರೆ. ಅವರ ಕೃತಿಗಳಲ್ಲೆಲ್ಲಾ ಶ್ರೀವಚನ ಭೂಷಣವೇ ಅತ್ಯುತ್ತಮವಾದುದು ಎಂದು ಹೇಳಿ ಅದರ ತಾತ್ಪರ್ಯವನ್ನರಿಯುವವರೂ ಅದರಂತೆ ಅನುಷ್ಠಾನ ಮಾಡುವವರೂ ದುರ್ಲಭವೆಂದು ತಿಳಿಸಿ ಹೀಗೆ ತಮ್ಮ ಅಭಿಪ್ರಾಯವನ್ನು ಸೂಚಿಸಿದಾರೆ:—

ಸತ್ಸಂಪ್ರದಾಯಸುಧಿಯಾ ಸತತೋಪಲಾಲ್ಯಾ
ಲಭ್ಯೇತ ಚೇತ್ ವಚನ ಭೂಷಣ ವಾಕ್ಯಟೀಕಾ ॥

"ಶ್ರೀವಚನಭೂಷಣಂ" ಮತ್ತು "ಆಚಾರ್ಯಹೃದಯಂ" ಎಂಬ ಗ್ರಂಥರತ್ನಗಳಿಗೆ ಮೊದಮೊದಲು ವ್ಯಾಖ್ಯಾನಮಾಡಿದವರು ಮೇಲುಕೋಟೆಯ

ಶ್ರೀಶಾನುದಾಸಗುರುಗಳು, ತಿರುನಾರಾಯಣಪುರತ್ತಾಯ್ ಎಂಬ ಜನನ್ಯಾಚಾರ್ಯರು ಎಂಬುದು ಮೈಸೂರು ಸೀಮೆಯವರಿಗೆಲ್ಲ ಹೆಮ್ಮೆಯ ಸಂಗತಿಯಾಗಿದೆ.

ಶ್ರೀ ವೇದಾನ್ತಾಚಾರ್ಯರು ರಚಿಸಿರುವ "ಲೋಕಾರ್ಯಪಂಚಾಶತ್" ಎಂಬ ಸ್ತೋತ್ರದ ಕೊನೇ ಎರಡು ಪದ್ಯಗಳನ್ನು ಮೇಲುಕೋಟೆಯಲ್ಲಿ ಪ್ರತಿ ಶ್ರವಣನಕ್ಷತ್ರದದಿನವೂ ಶ್ರೀಯತಿರಾಜಸಂಪತ್ಕುಮಾರನು ಲೋಕಾಚಾರ್ಯರ ಸನ್ನಿಧಿಗೆ ದಯಮಾಡಿಸುವಾಗ ತಿರುವಾರಾಧನಂ, ಸೇವೈ, ಶಾತ್ತುಮೊರೈ ಆದಮೇಲೆ ಅಧ್ಯಾಪಕರು ಹೇಳುವ ಪದ್ಧತಿಯಿದೆ :—

ಪ್ರಣಮ್ಯ ಚರಣೌ ತವ ಪ್ರಣತಕಾಮದೌ ದೇಹಿನಾಂ
ಇದಂ ಕಿಮಪಿ ವಾಂಛಿತಂ ಭುವನದೇಶಿಕ ! ಪ್ರಾರ್ಥಯೇ ।
ಅಸಾರಫಣಿತಿಕ್ರಮಾಚರಣಮದ್ಯ ಹಿತ್ವಾ ಮನಃ
ಪ್ರಯಾತು ಪದವೀಂ ಶುಭಾಂ ವಚನಭೂಷಣಾಲಂಕೃತಾಂ ॥
ಇತ್ಥಂಜಗದ್ಗುರುವರಪ್ರವಣೇನ ಸರ್ವತಂತ್ರ
ಸ್ವತಂತ್ರ ಕವಿತಾರ್ಕಿಕ ಸಿಂಹನಾಮ್ನಾ ।
ಶ್ರೀವೆಂಕಟೇಶಕವಿನಾ ಕಲಿತಾಂ ಸ್ತುತಿಂ ಯೇ
ಸ್ನಿಗ್ಧಾಃ ಪಠಂತಿ ಭುವಿ ಯಾನ್ತಿ ಪರಾಂ ಶ್ರಿಯಂ ತೇ ॥

ಈ ಪದ್ಯಗಳಿಂದ "ಕವಿತಾರ್ಕಿಕಸಿಂಹರಾದ" ಶ್ರೀ ವೆಂಕಟೇಶ ಕವಿಗಳಿಗೆ, ವೇದಾನ್ತಾಚಾರ್ಯರಿಗೆ, ಶ್ರೀವಚನಭೂಷಣಾಲಂಕೃತವಾದ ಸತ್ಸಂಪ್ರದಾಯ ನಿಷ್ಠೆಯಲ್ಲಿ ಇದ್ದ ಆದರ ವ್ಯಕ್ತವಾಗುತ್ತದೆ.

ಹೀಗೆ ನಮ್ಮ ಕುಲಪತಿಗಳಾದ ನಮ್ಮಾಳ್ವಾರ್‌ರವರ ಕೃಪೆಯಿಂದ ಯೋಗದಶೆಯಲ್ಲಿ ತಮಿಳು ವೇದಗಳನ್ನೂ ರಹಸ್ಯಗಳನ್ನೂ ಉಪದೇಶವಾಗಿ ಪಡೆದು ಅವುಗಳನ್ನು ಪ್ರಚಾರಕ್ಕೆ ತಂದ ಶ್ರೀಮನ್ನಾಥಮುನಿಗಳ ಕಾಲದಿಂದ ಅವರ ಮೊಮ್ಮಕ್ಕಳಾದ, ಶ್ರೀ ಆಳವಂದಾರ್ ಮೂಲಕ ತಮಗೆ ಬಂದ, ಪೂರ್ವಾಚಾರ್ಯ ಸುರಕ್ಷಿತವಾದ, ಉಭಯವೇದಾಂತಸಾಮರಸ್ಯದಿಂದ ಶೋಭಿಸುವ,ರಾಮಾನುಜ ದರ್ಶನವೆಂದು ಈಗ ಪ್ರಸಿದ್ಧವಾಗಿರುವ ನಮ್ಮ ಶ್ರೀವೈಷ್ಣವಸಿದ್ಧಾನ್ತವನ್ನು

ಚೆನ್ನಾಗಿ ಸಂರಕ್ಷಿಸಿದವರು ಭಗವದ್ರಾಮಾನುಜಾಚಾರ್ಯರು. ಸರ್ವಶ್ರುತಿ ಸಾಮರಸ್ಯ, ಸರ್ವಪ್ರಮಾಣ ತಾತ್ಪರ್ಯ ಮತ್ತು ಸಮನ್ವಯಂಗಳಿಂದ ನಮ್ಮ ಶ್ರೀವೈಷ್ಣವ ಸಂಪ್ರದಾಯ ಉಭಯವೇದಾನ್ತ ಪರಿಷ್ಕೃತವಾಗಿ ಸಕಲಮನುಜರ ಮನಸ್ಸಿಗೂ ಹೃದಯಕ್ಕೂ ಆನಂದಾವಹವಾಗಿದೆ."ಶೆಂಪೊನ್ನುಮ್ ಪವಳಮುಮ್ ತಿಹಳ್.ನ್ದ ನಾವರ್" ಎಂಬ ತಿರುಮಂಗೈಯಾಳ್ವಾರ್ ಶ್ರೀಸೂಕ್ತಿಯನ್ನು ನೆನಪಿಗೆ ತರುವಂತಹ ಆಚಾರ್ಯ ಸಾರ್ವಭೌಮರಾದ ಶ್ರೀವರವರಮುನಿಗಳೂ ತಿರುಪತಿ ಶ್ರೀನಿವಾಸನ ಘಂಟಾವತಾರವೆಂದು ಸಮಕಾಲೀನರಿಂದ ಪರಿಗಣಿತ ರಾದ ವಿದ್ಯಾಸಾಗರರೂ ವಿದ್ವಚ್ಛ್ರೀವಾವಿಮಲಮನಸರೂ ಸಜ್ಜನವಿಧೇಯರೂ ಪ್ರಬುದ್ಧಗುರು ವೀಕ್ಷಣ ಪ್ರಥಿತರೂ ಸತ್ಯವಾದಿಗಳೂ ಶುಭಮತಿಗಳೂ ಆಶು ಕವಿಗಳೂ ಏಕಸಂಧಿ ಗ್ರಾಹಿಗಳೂ ಆಗಿದ್ದ "ಕವಿತಾರ್ಕಿಕ ಕೇಸರಿ" ವೇದಾನ್ತಾ ಚಾರ್ಯರೂ ಏಕಕಂಠದಿಂದ ಮೇಲೆ ತಿಳಿಸಿರುವಂತೆ ಆದರಿಸುವ ಸತ್ಸಂಪ್ರ ದಾಯನಿಷ್ಠೆ ಇತೋऽಪ್ಯತಿಶಯವಾಗಿ ಬೆಳೆದು ನಮ್ಮ ಚೆಲುವ ಕನ್ನಡನಾಡಿ ನಲ್ಲಿ ವೈದಿಕೋತ್ತಮಸಿದ್ಧಾನ್ತವಾದ "ರಾಮಾನುಜದರ್ಶನ"ಸದಾ ರಾರಾಜಿಸು ತ್ತಿರುವಂತೆ ನಮ್ಮ ಗುರುಪರಂಪರೆಯ ಆದಿಯಲ್ಲಿ ಬೆಳಗುವ ದಿವ್ಯದಂಪತಿಗಳು ಅನುಗ್ರಹಿಸಲಿ !

"ರಾಮಾನುಜಾರ್ಯದಿವ್ಯಾಜ್ಞಾ ವರ್ಧತಾಮಭಿವರ್ಧತಾಂ
ದಿಗಂತವ್ಯಾಪಿನೀಭೂಯಾತ್ ಸಾ ಹಿ ಲೋಕಹಿತೈಷಿಣೀ"

ಶ್ರೀ ಗೋದಾಮಂದಿರಂ,
೩೪, ಒಂಬತ್ತನೇ ರಸ್ತೆ,
ಈಜುವಕೊಳದ ಬಡಾವಣೆ
ಮಲ್ಲೇಶ್ವರಂ, ಬೆಂಗಳೂರು-೩.

ಅ. ನ. ಶ್ರೀನಿವಾಸೈಯಂಗಾರ್,
ಗೌರವ ಸಂಪಾದಕ,
ಶ್ರೀಶಾನುದಾಸಗ್ರನ್ಥಮಾಲಾ
೧೬-೧-೧೯೬೯

॥ ಶ್ರೀಮತೇ ರಾಮಾನುಜಾಯ ನಮಃ ॥

## ಶ್ರೀ ಉ. ವೇ. ತಿರುನಾರಾಯಣಪುರಂ ಅಯೆಂಗಾರ್ ನರಸಿಂಹಾಚಾರ್ಯ ಸ್ವಾಮಿ ಚರಮಶ್ಲೋಕಂಗಳ್.

ಕಲ್ಯಾಣೀ ತೀರ್ಥತೀರೇ ಯದುಗಿರಿಶಿಖರೇ ನಿತ್ಯವಾಸಂ ಮಹಾತ್ಮಾ
ಕುರ್ವನ್ಸನ್ನ್ಯಸ್ತಕರ್ಮಾ ಯತಿಪತಿವಿಹಿತಂ ಸದ್ಭಿರಭ್ಯರ್ಥನೀಯಮ್ ।
**ಆಯಿಶಾಮಾಮಾಖ್ಯಸೂರಿ**ರ್ಹರಿಪರಚರಣೇ ಸಕ್ತಧೀರ್ಲಬ್ಧತುಷ್ಟಃ
ವೈಕುಂಠಂ ವರ್ಧಯನ್ ಯೋ ಯತಿಪತಿತನಯಂ ಸೇವಮಾನೋ ರರಾಜ ॥ ೧ ॥

ವೃದ್ಧೋ ಮಾನ್ಯೋ ವದಾನ್ಯಃ ಶುಭಗುಣಚರಿತಃ ಸಾಧುಸೇವೀ ಮನೀಷೀ
ನಿತ್ಯಂ ನಾರಾಯಣಾಗ್ರೇ ಶ್ರುತಿಸುಮಪಠನೇ ದೀಕ್ಷಿತಃ ಪುಣ್ಯಮೂರ್ತಿಃ ।
ಸಾಯಂಪ್ರಾತಸ್ಸಿಷೇವೇ ಯತಿಪತಿಚರಣೌ ದೇಶಿಕಾನ್ ದಿವ್ಯಸೂರೀನ್
ಶ್ರೀಶಂ ನಾರಾಯಣಂ ತಂ ಯದುಗಿರಿನಿಲಯಂ ಶ್ರೀಸಖಂ ಶ್ರೀಸುತಂ ಚ ॥ ೨ ॥

ಆತ್ರೇಯಾಖ್ಯ ಸುವಂಶ ಮೌಕ್ತಿಕಮಣಿಃ ಪೂರ್ವಪ್ರಯೋಗೇ ಪಟುಃ
ಸಾಧೂನಾಂ ಯಮಿನಾಂ ಚ ಪೂಜನರತೋ ಧರ್ಮೇಽಸ್ಥಿರಸ್ಸಾತ್ತ್ವಿಕಃ ।
ಬಂಧೂನಾಂ ಪುರವಾಸಿನಾಂ ಚ ಸುಹೃದಾಂ ಕ್ಷೇಮೇರತಸ್ಸರ್ವದಾ
**ಅಯೆಂಗಾರ್ ನರಸಿಂಹಸೂರಿರಗಮತ್ ವಿಷ್ಣೋಃಪದಂ ಶಾಶ್ವತಂ** ॥ ೩ ॥

ಶ್ರೀಭಾಷ್ಯಂ ದ್ರವಿಡಾಗಮಂ ಶ್ರುತಿಸುಮಂ ಮನ್ತ್ರಂ ತಥಾ ಜ್ಯೌತಿಷಂ
ಜಾನನ್ನಿತ್ಯಮತಂದ್ರಿತೋ ದಿನಮುಖೇ ಸ್ನಾತ್ವಾ ಹರೇಃ ಪೂಜನಂ ।
ಕೃತ್ವಾ ಶ್ರೀಯದುಶೈಲನಾಥನಿಲಯಂ ಗತ್ವಾ ತು ರಾಮಾನುಜಂ
ನತ್ವಾ ತಸ್ಯ ಕೃಪಾಬಲೇನ ನಿಯತಾಂ ಸೇವಾಂ ಪರಾಂ ವ್ಯಾತನೋತ್ ॥ ೪ ॥

ಶ್ರೀಶಾನುದಾಸಾನ್ವಯ ಶಿಷ್ಯಮುಖ್ಯಃ ರಾಮಾನುಜಾಚಾರ್ಯಪದೈಕನಿಷ್ಠಃ ।
ಶಠಾರಿಸೂಕ್ತ್ಯರ್ಥರಹಸ್ಯವೇದೀ ಶ್ರೀಮಾನ್ ನೃಸಿಂಹೋ ಜನಕೋ ಗುರುರ್ಮೇ ॥ ೫ ॥

ಆತ್ರೇಯಾನ್ವಯಸಂಭೂತೋ ವೇಂಕಟಾರ್ಯಸುತಃ ಕೃತೀ ।
ಕುಲಸ್ಯಾಸ್ಯ ಸಮುದ್ಧರ್ತಾ ಶಿಷ್ಟಾಚಾರಪರಾಯಣಃ ॥

ವೇದಾಸ್ತ್ರದ್ವಯಸಂಪನ್ನಃ ಪ್ರಯೋಗವಿಧಿಪಾರಗಃ ।
ಚರಮೋಪಾಯನಿಷ್ಠಶ್ಚ ಬಂಧುಮಿತ್ರಹಿತೇ ರತಃ ॥

ವೈಷ್ಣವಾಚಾರನಿಷ್ಣಾತಃ ಸದ್ಗ್ರಂಥಪಠನೇ ರತಃ ।
"**ಶ್ರೀಶಾನುದಾಸ**" ಕೈಂಕರ್ಯತತ್ಪರೋ ಭಗವತ್ಪರಃ ॥

|| ಶ್ರೀಮತೇ ರಾಮಾನುಜಾಯ ನಮಃ ||

## ಶ್ರೀ ಉ. ವೇ. ತಿರುನಾರಾಯಣಪುರಂ ಅಯಂಗಾರ್ ನರಸಿಂಹಾಚಾರ್ಯ ಸ್ವಾಮಿ ಚರಮಶ್ಲೋಕಂಗಳ್.

ಕಲ್ಯಾಣೀ ತೀರ್ಥತೀರೇ ಯದುಗಿರಿಶಿಖರೇ ನಿತ್ಯವಾಸಂ ಮಹಾತ್ಮಾ
ಕುರ್ವನ್ಧನ್ಯಸ್ಸುಕರ್ಮಾ ಯತಿಪತಿವಿಹಿತಂ ಸದ್ಭಿರಭ್ಯರ್ಥನೀಯಂ |
**ಆಯಿಾಮಾಮಾಖ್ಯಸೂರಿ**ರ್ಹರಿಪರಚರಣೇ ಸಕ್ತಧೀರ್ಲಬ್ಧತುಷ್ಟಿಃ
ವೈಕುಂಠಂ ವರ್ಧಯ್ಯ ಯೋ ಯತಿಪತಿತನಯಂ ಸೇವಮಾನೋ ರರಾಜ || ೧ ||

ವೃದ್ಧೋ ಮಾನ್ಯೋ ವದಾನ್ಯಃ ಶುಭಗುಣಚರಿತಃ ಸಾಧುಸೇವೀ ಮನೀಷೀ
ನಿತ್ಯಂ ನಾರಾಯಣಾಗ್ರೇ ಶ್ರುತಿಸುಮಪಠನೇ ದೀಕ್ಷಿತಃ ಪುಣ್ಯಮೂರ್ತಿಃ |
ಸಾಯಂಪ್ರಾತಸ್ಸಿಷೇವೇ ಯತಿಪತಿಚರಣೌ ದೇಶಿಕಾನ್ ದಿವ್ಯಸೂರೀನ್
ಶ್ರೀಶಂ ನಾರಾಯಣಂ ತಂ ಯದುಗಿರಿನಿಲಯಂ ಶ್ರೀಸಖಂ ಶ್ರೀಸುತಂ ಚ || ೨ ||

ಆತ್ರೇಯಾಖ್ಯ ಸುವಂಶ ಮೌಕ್ತಿಕಮಣಿಃ ಪೂರ್ವಪ್ರಯೋಗೇ ಪಟುಃ
ಸಾಧೂನಾಂ ಯಮಿನಾಂ ಚ ಪೂಜನರತೋ ಧರ್ಮೇಸ್ಥಿರಸ್ಸಾತ್ತ್ವಿಕಃ |
ಬಂಧೂನಾಂ ಪುರವಾಸಿನಾಂ ಚ ಸುಹೃದಾಂ ಕ್ಷೇಮೇರತಸ್ಸರ್ವದಾ
**ಅಯಂಗಾರ್ ನರಸಿಂಹಸೂರಿರಗಮತ್ ವಿಷ್ಣೋಃಪದಂ ಶಾಶ್ವತಂ** || ೩ ||

ಶ್ರೀಭಾಷ್ಯಂ ದ್ರವಿಡಾಗಮಂ ಶ್ರುತಿಸುಮಂ ಮನ್ತ್ರಂ ತಥಾ ಜ್ಯೌತಿಷಂ
ಜಾನನ್ನಿತ್ಯಮತಂದ್ರಿತೋ ದಿನಮುಖೇ ಸ್ನಾತ್ವಾ ಹರೇಃ ಪೂಜನಂ |
ಕೃತ್ವಾ ಶ್ರೀಯದುಶೈಲನಾಥನಿಲಯಂ ಗತ್ವಾ ತು ರಾಮಾನುಜಂ
ನತ್ವಾ ತಸ್ಯ ಕೃಪಾಬಲೇನ ನಿಯತಾಂ ಸೇವಾಂ ಪರಾಂ ವ್ಯಾತನೋತ್ || ೪ ||

ಶ್ರೀಶಾನುದಾಸಾನ್ವಯ ಶಿಷ್ಯಮುಖ್ಯಃ ರಾಮಾನುಜಾಚಾರ್ಯಪದೈಕನಿಷ್ಠಃ |
ಶಠಾರಿಸೂಕ್ತ್ಯರ್ಥರಹಸ್ಯವೇದೀ ಶ್ರೀಮಾನ್ ನೃಸಿಂಹೋ ಜನಕೋ ಗುರುರ್ಮೇ || ೫ ||

ಆತ್ರೇಯಾನ್ವಯಸಂಭೂತೋ ವೇಂಕಟಾರ್ಯಸುತಃ ಕೃತೀ |
ಕುಲಸ್ಯಾಸ್ಯ ಸಮುದ್ಧರ್ತಾ ಶಿಷ್ಟಾಚಾರಪರಾಯಣಃ ||

ವೇದಾನ್ತದ್ವಯಸಂಪನ್ನಃ ಪ್ರಯೋಗವಿಧಿಪಾರಗಃ |
ಚರಮೋಪಾಯನಿಷ್ಠಶ್ಚ ಬಂಧುಮಿತ್ರಹಿತೇ ರತಃ ||

ವೈಷ್ಣವಾಚಾರನಿಷ್ಣಾತಃ ಸದ್ಗ್ರಂಥಪಠನೇ ರತಃ |
“**ಶ್ರೀಶಾನುದಾಸ**” ಕೈಂಕರ್ಯತತ್ಪರೋ ಭಗವತ್ಪರಃ ||

## ಅನುಗ್ರಾಹಕರು

ಶ್ರೀಮತ್ಪರಮಹಂಸೇತ್ಯಾದಿ ಶ್ರೀರಂಗನಾರಾಯಣಜೀಯರ್ ಸ್ವಾಮಿಗಳವರು, ಶ್ರೀ ಕಾಂಚೀ ವಾದಿಕೇಸರಿ ಅಳಗಿಯ ಮಣವಾಳ ಜೀಯರ್ ಸ್ವಾಮಿಗಳವರು. ಶ್ರೀ ಯದುಗಿರಿಯತಿರಾಜಮಠದ ಶ್ರೀ ಅಹೋಬಲ ಮಠದ ಶ್ರೀ ಸ್ವಾಮಿಗಳವರು, ಶ್ರೀ ಅದಮಾರು ಮಠದ ಶ್ರೀ ಸ್ವಾಮಿಗಳವರು ಉಡುಪಿ., ಶ್ರೀಮತ್ಪರಮಹಂಸೇತ್ಯಾದಿ ಭಂಡಾರ ಕೇರಿ ಮಠದ ಶ್ರೀಪಾದಂಗಳವರು.

**ಸಂರಕ್ಷಕರು :** ಶ್ರೀಮಾನ್ ತಂಗ್ಲಿ ಸಾಹುಕಾರ್ ಮತ್ತು ಜಮೀನ್ ದಾರ್ ಟಿ. ಎಸ್. ಕೃಷ್ಣಸ್ವಾಮಿ ಐಯ್ಯಂಗಾರ್ ಅವರು.

## ಕೃ ತ ಜ್ಞ ತೆ

ಈ ಪ್ರಬಂಧದ ಪ್ರಕಟಣೆಗೆ ಉದಾರ ಸಹಕಾರದೊಡನೆ ಪ್ರೋತ್ಸಾಹವಿತ್ತ ಈ ಸಂಸ್ಥೆಗಳಿಗೂ ಮಹನೀಯರಿಗೂ ಗ್ರಂಥಮಾಲಾ ಧನ್ಯವಾದಗಳನ್ನು ಸಮರ್ಪಿಸುತ್ತೇನೆ.

೧. ಶ್ರೀ ಉಭಯ ವೇದಾನ್ತ ಪ್ರವರ್ತನ ಸಭಾ, ಮಲ್ಲೇಶ್ವರಂ, ಬೆಂಗಳೂರು.
೨. ಶ್ರೀ ಓ. ಶ್ರೀನಿವಾಸನ್, ಜ್ಯೂಪಿಟರ್ ಪ್ರೆಸ್, ಬೆಂಗಳೂರು.
೩. ಶ್ರೀ ಉ. ವೇ. ತೋಳಪ್ಪ ಎಂ. ಜಿ. ಶಿಂಗ್ರಾಚಾರ್ಯ ಸ್ವಾಮಿಗಳು,
೪. ಶ್ರೀ ಕಡಾಂಬಿ ಶ್ರೀನಿವಾಸೈಯಂಗಾರ್ಯರು, ಬೆಂಗಳೂರು.
೫. ಶ್ರೀ ವಿದ್ಯಾಭೂಷಣಂ ಹೆಮ್ಮಿಗೆ ರಂಗಾಚಾರ್, ಅವರು ಬೆಂಗಳೂರು.
೬. ಡಾಕ್ಟರ್ ಎಸ್. ವರದರಾಜನ್, ಬೆಂಗಳೂರು ವಿಶ್ವವಿದ್ಯಾಲಯ.
೭. ಶ್ರೀಮಾನ್ ಮತ್ತು ಶ್ರೀಮತಿ ಸೌ॥ ಕಮಲಾಪತಿ ಹರಿದಾಸಮಲ್ ಜೀ ದಂಪತಿಗಳು ನಗರ್ತಪೇಟೆ, ಬೆಂಗಳೂರು.
೮. ಶ್ರೀ ವಿದ್ವಾನ್ ಆರೈಯರ್ ಶ್ರೀನಿವಾಸ ಅಯ್ಯಂಗಾರ್ಯರು ಮೇಲುಕೋಟೆ.

" ಪುನರ್ವಸು ಉತ್ಸವ "
ಶ್ರೀ ಎಂಬಾರ್ ತಿರುನಕ್ಷತ್ರಂ
೩೧–೧–೧೯೬೯

ಗೌರವ ಸಂಪಾದಕ
ಆ. ನ. ಶ್ರೀನಿವಾಸೈಯಂಗಾರ್,
ಬೆಂಗಳೂರು.

# ಶ್ರೀಶಾನುದಾಸ ಗ್ರನ್ಥಮಾಲಾ ಪ್ರಕಟಣೆಗಳು

೧. ಶ್ರೀ ಗೋದಾದೇವಿಯ "ತಿರುಪ್ಪಾವೈ" (ತಿದ್ದಿದ ಎರಡನೆಯ ಮುದ್ರಣ. "ಉತ್ತಮ ರೀತಿಯ ಕಾವ್ಯ, ಭಕ್ತಿ ಪ್ರತಿಪಾದಕ ಅತ್ಯುತ್ತಮ ಧರ್ಮ ಗ್ರಂಥ" — ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರ ಮುನ್ನುಡಿಯೊಡನೆ (ಪ್ರತಿಗಳು ಮುಗಿದಿವೆ.)

೨. ತೊಂಡರಡಿಪ್ಪೊಡಿಯಾಳ್ವಾರರ "ತಿರುಮಾಲೈ" (ಪ್ರತಿಗಳು ಮುಗಿದಿವೆ).

೩. ಧರ್ಮದ ಮರ್ಮ (ನಾಲ್ಕು ಪ್ರಬಂಧಗಳು) ,,

೪. "ನಿತ್ಯಾನುಸನ್ಧಾನಂ" (ಶ್ರೀ ವೈಷ್ಣವರು ದೇವರ ಪೂಜೆಯ ಕಾಲದಲ್ಲಿ ಹಾಡುವ ತಮಿಳು ಗೀತೆಗಳು). ರೂ. ೨-೫೦

೫. ನಮ್ಮಾಳ್ವಾರರ "ತಿರುವಾಶಿರಿಯಂ" ರೂ. ೦-೫೦

೬. ಶ್ರೀ ಗೋದಾದೇವಿಯ 'ನಾಯಕೀ ಗೀತೆ' (ಸಚಿತ್ರ) ತಮಿಳು ಮೂಲ ಅನುವಾದ ಮತ್ತು ವಿಶೇಷಾರ್ಥಗಳೊಡನೆ ಬೆಲೆ : ರೂ. ೨-೫೦

[ಇವು ಮುಜರಾಯ್ ಕಮಿಷನರಿಂದ ಮೈಸೂರು ದೇಶದ ಎಲ್ಲಾ ವಿಷ್ಣು ಮಂದಿರಗಳಿಗೂ ಮಂಜೂರಾಗಿವೆ. ('ತಿರುಪ್ಪಾವೈ'—ಪಠ್ಯ ಪುಸ್ತಕ ಸಮಿತಿಯಿಂದ ಎಲ್ಲಾ ಹೈಸ್ಕೂಲ್ ನಾರ್ಮಲ್ ಸ್ಕೂಲ್ ಮತ್ತು ಪುಸ್ತಕ ಭಂಡಾರಗಳಿಗೂ ಮಂಜೂರಾಗಿದೆ.]

೭. ಶ್ರೀಸಾಹಿತ್ಯರತ್ನಂ ಜಗ್ಗು ವೆಂಕಟಾಚಾರ್ಯಸ್ವಾಮಿ ಸ್ಮಾರಕ ಗ್ರಂಥಮಾಲಾ ರೂ. ೩-೦೦

## ಬಿಡಿ ಮುತ್ತುಗಳು

ಸ್ತೋತ್ರ ಶಾಖೆ ೧. ಭಾರತ ಕೃಷ್ಣ ಮಂಗಳಂ ಬೆಲೆ : ೨೦ ಪೈಸೆ.
೨. ಮೇಲುಕೋಟೆ ಮತ್ತು ಶ್ರೀ ವೇದಾನ್ತಾಚಾರ್ಯರು ೨೫ ಪೈಸೆ.

ಆ. ನ. ಶ್ರೀನಿವಾಸೈಯಂಗಾರ್, ಬಿ.ಎಸ್.ಸಿ., (ಆನರ್ಸ್)
ಶ್ರೀ ಗೋದಾಮಂದಿರಂ, ೩೪, ಒಂಬತ್ತನೇ ರಸ್ತೆ,
ಈಜುವ ಕೊಳದ ಬಡಾವಣೆ, ಮಲ್ಲೇಶ್ವರಂ ಪೋಸ್ಟ್, ಬೆಂಗಳೂರು-೩.